# ಕನ್ನಡ ವಿಶ್ವವಿದ್ಯಾಲಯ, ಹಂಪಿ




ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

ವಿಷಯ:

## "ಬಿ.ಆರ್.ಲಕ್ಷ್ಮಣರಾವ್ ಕಾವ್ಯದಲ್ಲಿನ - ಸ್ತ್ರೀ ಸಮಾಜ" ಒಂದು ಅಧ್ಯಯನ


ಸಂಶೋಧನಾ ವಿದ್ಯಾರ್ಥಿ

ವಾಣಿ. ವಿ

ನೊಂದಣಿ ಸಂಖ್ಯೆ : ೧೫೨೦೦೧೦೩೦೦೭೮

ಮಾರ್ಗದರ್ಶಕರು

ಡಾ. ವೆಂಕಟಪ್ಪ ಎಂ.ಎ ಪಿಎಚ್.ಡಿ

ಸಹಾಯಕ ಪ್ರಾಧ್ಯಾಪಕರು

ಎಸ್.ಎಲ್..ಎನ್. ಕಾಲೇಜು

ಕೋಟೆ ಬೆಂಗಳೂರು - ೫೬೦೦೦೨





ಮಾನ್ಯತಾ ಸಂಸ್ಥೆ

ಕನ್ನಡ ಸಾಹಿತ್ಯ ಪರಿಷತ್ತು

ಕನ್ನಡ ಸಂಶೋಧನಾ ಕೇಂದ್ರ

ಪಂಪ ಮಹಾಕವಿ ರಸ್ತೆ

ಚಾಮರಾಜಪೇಟೆ, ಬೆಂಗಳೂರು - ೫೬೦೦೧೮

## ಕನ್ನಡ ವಿಶ್ವವಿದ್ಯಾಲಯ, ಹಂಪಿ






ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

ವಿಷಯ:

# "ಬಿ.ಆರ್.ಲಕ್ಷ್ಮಣರಾವ್ ಕಾವ್ಯದಲ್ಲಿನ - ಸ್ತ್ರೀ ಸಮಾಜ" ಒಂದು ಅಧ್ಯಯನ

ಸಂಶೋಧನಾ ವಿದ್ಯಾರ್ಥಿ
ವಾಣಿ. ವಿ
ನೊಂದಣಿ ಸಂಖ್ಯೆ : ೧೫೨೦೦೧೦೩೦೦೭೮

ಮಾರ್ಗದರ್ಶಕರು
ಡಾ. ವೆಂಕಟಪ್ಪ ಎಂ.ಎ ಪಿಎಚ್.ಡಿ
ಸಹಾಯಕ ಪ್ರಾಧ್ಯಾಪಕರು
ಎಸ್.ಎಲ್..ಎನ್. ಕಾಲೇಜು
ಕೋಟೆ ಬೆಂಗಳೂರು - ೫೬೦೦೦೨



ಮಾನ್ಯತಾ ಸಂಸ್ಥೆ
ಕನ್ನಡ ಸಾಹಿತ್ಯ ಪರಿಷತ್ತು
ಕನ್ನಡ ಸಂಶೋಧನಾ ಕೇಂದ್ರ
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು - ೫೬೦೦೧೮

1293

ದೃಢೀಕರಣ ಪತ್ರ

ವಾಣಿ ವಿ ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧ ಪಡಿಸಿರುವ"ಬಿ.ಆರ್.ಲಕ್ಷ್ಮಣರಾವ್‌ರವರ ಕಾವ್ಯದಲ್ಲಿನ ಸ್ತ್ರೀ ಸಮಾಜ"ಒಂದು ಅಧ್ಯಯನ ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವ ವಿದ್ಯಾನಿಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ :

ಸ್ಥಳ :

ಸಹಿ

ಮಾರ್ಗದರ್ಶಕರು
ಡಾ. ವೆಂಕಟಪ್ಪ
ಸಹಾಯಕ ಪ್ರಾಧ್ಯಾಪಕರು
ಎಸ್.ಎಲ್. ಎನ್. ಕಾಲೇಜು
ಕೋಟೆ
ಬೆಂಗಳೂರು

ಡಾ॥ ವೆಂಕಟಪ್ಪ, ಎಂ.ಎ., ಪಿಎಚ್.ಡಿ.
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಎಸ್.ಎಲ್.ಎನ್. ಕಾಲೇಜು
ಕೋಟೆ, ಬೆಂಗಳೂರು-560 002.

## ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವ ವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ "ಬಿ.ಆರ್.ಲಕ್ಷ್ಮಣರಾವ್‌ರವರ ಕಾವ್ಯದಲ್ಲಿನ ಸ್ತ್ರೀ ಸಮಾಜ" ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ಡಾ. ವೆಂಕಟಪ್ಪ, ಸಹಾಯಕ ಪ್ರಾಧ್ಯಾಪಕರು, ಎಸ್.ಎಲ್.ಎನ್. ಕಾಲೇಜು, ಕೋಟೆ, ಬೆಂಗಳೂರು. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲೀ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೦-೦೭-೨೦೧೬

ಸ್ಥಳ : ಬೆಂಗಳೂರು

ವಾಣಿ ವಿ

ಸಂಶೋಧನಾ ವಿದ್ಯಾರ್ಥಿನಿ

# ಬಿ.ಆರ್.ಲಕ್ಷ್ಮಣರಾವ್‌ರವರ ಕಾವ್ಯದಲ್ಲಿನ ಸ್ತ್ರೀ ಸಮಾಜ ಒಂದು ಅಧ್ಯಯನ

## ಪರಿವಿಡಿ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ೧. ಪೀಠಿಕೆ

ನವ್ಯ ಕಾವ್ಯದ ಸಂದರ್ಭದಲ್ಲಿ ಕಾವ್ಯ ಜಗತ್ತನ್ನು ಪ್ರವೇಶಿಸಿದಂತಹ ಕವಿಗಳಲ್ಲಿ ಬಿ.ಆರ್. ಲಕ್ಷ್ಮಣ ರಾವ್‌ರವರು ಒಬ್ಬರು. ತಮ್ಮ ಅಭಿಪ್ರಾಯಗಳಿಗೆ, ಅನಿಸಿಕೆಗಳಿಗೆ ಹಾಗೂ ಪಡೆದ ಅನುಭವಗಳಿಗೆ ಕಾಲ್ಪನಿಕ ಚಿತ್ರಣ ನೀಡಿ ಬರವಣಿಗೆಯ ಮೂಲಕ ಅಭಿವ್ಯಕ್ತಗೊಳಿಸಿ; ತಮ್ಮದೇ ಆದಂತಹ ವಿಶಿಷ್ಟವಾದ ಶೈಲಿಯಲ್ಲಿ ಕವನಗಳನ್ನು ಬರೆದವರು.

ಉತ್ಸಾಹದಿಂದ ಜೀವಂತ ಕಾವ್ಯ ರಚಿಸಿದ ಲಕ್ಷ್ಮಣ್ ರಾವ್ ಕಳೆದ ಮೂರು ದಶಕಗಳಲ್ಲಿ ತಮ್ಮದೇ ಆದ ವಿಶಿಷ್ಟ ಶೈಲಿ ರೂಪಿಸಿಕೊಂಡು ಮಹತ್ವದ ಕಾವ್ಯ ರಚಿಸಿದ್ದಾರೆ. ನೆನಪಿನಲ್ಲಿಟ್ಟುಕೊಳ್ಳಬೇಕಾದ, ವ್ಯಕ್ತಿ ಮತ್ತೆ ಓದಿ ಸಂತೋಷ ಪಡಬಹುದಾದ ಅನೇಕ ಉತ್ತಮ ಕವಿತೆಗಳನ್ನು ನೀಡಿದ್ದಾರೆ.

ಲಕ್ಷ್ಮಣರಾವ್‌ರವರು ಆ ಕಾಲಕ್ಕೆ ಅಡಿಗರಿಗಿಂತ ಭಿನ್ನವಾದ ತರುಣ ಜನಾಂಗದ ಪ್ರತಿನಿಧಿಯಂತೆ ನಮಗೆ ಕಾಣಿಸುತ್ತಾರೆ. ಲಂಕೇಶರು ಹೇಳುವಂತೆ ಅಡಿಗರಿಗಿಂತ ಬೇರೆಯದೇ ಆದ ಸ್ವಾತಂತ್ರ್ಯಾಕಾಂಕ್ಷೆ, ಉಲ್ಲಾಸ, ನೋವು ಲಕ್ಷ್ಮಣ್ ರಾವ್‌ರಲ್ಲಿದೆ.

ಲಕ್ಷ್ಮಣರಾವ್‌ರವರು ಕಾವ್ಯೋದ್ಯೋಗಕ್ಕೆ ತೊಡಗಿದ್ದು ನವ್ಯ ಕಾವ್ಯ ಶಿಖರದಲ್ಲಿದ್ದ ಕಾಲದಲ್ಲಿ "ಲಕ್ಷ್ಮಣರಾವ್ ತಮ್ಮ ಮೊದಲ ಸಂಕಲನ ಗೋಪಿ ಮತ್ತು ಗಾಂಡಲೀನ (೧೯೭೧)ದಲ್ಲಿಯೇ ಇಂಥ ಕಲಾವಿದನ ಎಲ್ಲ ಲಕ್ಷಣಗಳನ್ನೂ ಪ್ರಕಟಿಸಿದರೆಂದೇ ಕನ್ನಡ ಕಾವ್ಯ ಜಗತ್ತು ಅವರನ್ನು ಉತ್ಸಾಹದಿಂದ ಬರಮಾಡಿಕೊಂಡಿತು".

---

೧)"ಜೀವಜಲ" – ಸಮಗ್ರಕಾವ್ಯ, ಬಿ.ಆರ್.ಲಕ್ಷ್ಮಣರಾವ್ ಸಪ್ನ ಬುಕ್ ಹೌಸ್, ಬೆಂಗಳೂರು ೨೦೧೧

## ೨. ಉದ್ದೇಶ

'ಕವಿಯನ್ನು ನಾವು ಮೆಚ್ಚುವುದು ಸುಖದ ಕೊಡುಗೆಗಲ್ಲ, ದುಃಖದ ಕೊಡುಗೆಗಲ್ಲ, ಅನುಭವದ ಕೊಡುಗೆಗೆ. ಕವಿ ಈ ಅರ್ಥದಲ್ಲಿಯೇ ತಾನು, ಎಲ್ಲರ ಬಗ್ಗೆ ಮಹಾಕ್ರೂರಿ; ಸುಖ ದುಃಖವನ್ನು ಒಳಗೊಂಡೂ ಅವನ್ನು ಮೀರಿ ನಿಲ್ಲುವ ಅವನ ನಿರ್ಲಿಪ್ತತೆಯ ಮೂಲಕವೇ ಆತ ಅನುಭವ ಕೊಡುವುದು, ಕಲಾವಿದನಾಗುವುದು.' ಲಕ್ಷ್ಮಣರಾವ್ ತಮ್ಮ ಮೊದಲ ಸಂಕಲನ 'ಗೋಪಿ ಮತ್ತು ಗಾಂಡಲೀನ'(೧೯೭೧)ದಲ್ಲಿಯೇ ಇಂಥ ಕಲಾವಿದನ ಎಲ್ಲ ಲಕ್ಷಣಗಳನ್ನೂ ಪ್ರಕಟಿಸಿದರೆಂದೇ ಕನ್ನಡ ಕಾವ್ಯ ಜಗತ್ತು ಅವರನ್ನು ಉತ್ಸಾಹದಿಂದ ಬರಮಾಡಿಕೊಂಡಿತು. ಆ ಕಾಲದಲ್ಲಿ ಹೊಸ ಕಾವ್ಯವೆಂದರೆ ಕೇವಲ ದುರಂತಮಯವಾದದ್ದು, ಕ್ಲಿಷ್ಟವಾದದ್ದು, ಸಿನಿಕತನದ್ದು ಎಂಬಂತಹ ತಿಳುವಳಿಕೆ ರೂಢಿಯಲ್ಲಿತ್ತು. ಈ ಅಭಿಪ್ರಾಯಕ್ಕೆ ಉತ್ತರವೆಂಬಂತೆ ಅತ್ಯಂತ ಲವಲವಿಕೆಯಿಂದ, ಉತ್ಸಾಹದಿಂದ ಜೀವಂತ ಕಾವ್ಯ ರಚಿಸಿದ ಲಕ್ಷ್ಮಣರಾವ್ ಕಳೆದ ಮೂರು ದಶಕಗಳಲ್ಲಿ ತಮ್ಮದೇ ಆದ ವಿಶಿಷ್ಟ ಶೈಲಿ ರೂಪಿಸಿಕೊಂಡು ಚಳುವಳಿಯ ಅಬ್ಬರದಲ್ಲಿ ತಮ್ಮನ್ನು ಕಳೆದುಕೊಳ್ಳದೆ ಮಹತ್ವದ ಕಾವ್ಯ ರಚಿಸಿದ್ದಾರೆ. ಜನಪ್ರಿಯತೆಯನ್ನು ಸಂಶಯದಿಂದ ನೋಡುವ ಅಕೆಡೆಮಿಕ್ ವಿಮರ್ಶೆಯ ಹಂಗು ತೊರೆದು, ಕಾವ್ಯ ರಸಿಕರ ಮೆಚ್ಚುಗೆ ಗೌರವಗಳಿಗೆ ಪಾತ್ರರಾಗಿದ್ದಾರೆ.

ಲಕ್ಷ್ಮಣ ರಾವ್‌ರವರು ತರುಣ ಜನಾಂಗದ ಪ್ರತಿನಿಧಿಯಂತೆ ನಮಗೆ ಕಾಣಿಸುತ್ತಾರೆ. ತರುಣ ಜನಾಂಗದ ಈ ನೋವು ಯೌವನದ ಸಹಜ ಸ್ಥಿತಿ ಮಾತ್ರವಲ್ಲ. 'ಯಾವುದೇ ಬಲವಾದ ವ್ಯವಸ್ಥೆಯ ಬೆಂಬಲವಿಲ್ಲದ, ದಬ್ಬಾಳಿಕೆ ಮಾಡಿ ದಮನಗೊಳಿಸುವ ತಾಕತ್ತಿಲ್ಲದ, ಏಳಲಾರದ, ನಿಲ್ಲಲಾರದ ಸಮಾಜದಲ್ಲಿ ಪೂರ್ವದವರೂ ಅಲ್ಲದ, ಪಶ್ಚಿಮದವರೂ ಅಲ್ಲದ, ಆದರೆ ತಮ್ಮ ಅಸ್ತಿತ್ವ ಖಚಿತಪಡಿಸಕೊಳ್ಳದೆ ಗತ್ಯಂತರವಿಲ್ಲ ಎಂಬ ಅರಿವುಳ್ಳ ಒಂದು ಜನಾಂಗದ ನೋವು ಒಂದು ರೀತಿಯಲ್ಲಿ 'ಕಿಶೋರನ ಅಶೂರಗೀತೆ', ಲಕ್ಷ್ಮಣ್‌ರಾವ್ ಕಾವ್ಯ ಇಂಥ ಒಂದು ಜನಾಂಗದ ನೋವನ್ನು ಸಮರ್ಥವಾಗಿ ಪ್ರತಿನಿಧಿಸುತ್ತದೆ.

ಲಕ್ಷ್ಮಣ್ ರಾವ್ ಕಾವ್ಯಜಗತ್ತು ಅಡಿಗರಂತೆ ಮಹತ್ವಾಕಾಂಕ್ಷೆಯೂ ಇಲ್ಲಿ ನರಸಿಂಹಸ್ವಾಮಿಯವರಂತೆ ದೈನಿಕಗಳ ನಡುವೆಯೇ ಬದುಕನ್ನು ಸಹನೀಯಗೊಳಿಸಿಕೊಳ್ಳುವ ಸ್ವಭಾವವೂ ಅಲ್ಲ. ಲಕ್ಷ್ಮಣರಾವ್ ಅವರದು ಪಿಪ್ಪಲ ಜಗತ್ತು. ಹೀಗಾಗಿಯೇ ಇವರದು ನವ್ಯಕ್ಕಿಂತ ಭಿನ್ನವಾದ ಹೊಸ ಜನಾಂಗದ ಕಾವ್ಯ.

ಅಪ್ಪ, ಅಮ್ಮ ಹಾಗೂ ಶಕೂ ಲಕ್ಷ್ಮಣರಾವ್ ಕಾವ್ಯದಲ್ಲಿನ ಪ್ರಧಾನ ರೂಪಗಳು. ಅಪ್ಪನ ಸಂಪ್ರದಾಯ ಜಗತ್ತು, ಅಮ್ಮನ ಭಾವ ಜಗತ್ತು ಹಾಗೂ ಶಕೂಳ ಪ್ರೇಮ ಜಗತ್ತು ಇವುಗಳ ನಡುವೆ ತನ್ನ ಅಸ್ತಿತ್ವವನ್ನು ಗುರ್ತಿಸಿಕೊಳ್ಳುವ ತನ್ನನ್ನು ತಾನು ಕಂಡುಕೊಳ್ಳುವ ಪ್ರಯತ್ನವೇ ಅವರ ಆರಂಭದ ಕವಿತೆಗಳ ವಸ್ತು. ಇದು ಪ್ರಧಾನವಾಗಿ ಯೌವನದ ಜಗತ್ತು ಅದಕ್ಕೆ ತಕ್ಕಂತೆ ಅದಮ್ಯ ಬಯಕೆ ಉತ್ಸಾಹ ಲವಲವಿಕೆ ಉನ್ಮಾದ ಇಲ್ಲಿ ಅಭಿವ್ಯಕ್ತಿ ಪಡೆಯುತ್ತಾ ಹೋಗುತ್ತದೆ.

ಫೋಟೋಗ್ರಾಫರ್, ಗೋಪಿ ಮತ್ತು ಗಾಂಡಲೀನ, ಸಖೀಗೀತ, ಮೊದಲಾದ ಕವಿತೆಗಳನ್ನು ನಾವು ಈ ಹಿನ್ನೆಲೆಯಲ್ಲಿ ಗಮನಿಸಬೇಕು.

'ಸಖೀಗೀತ' ತನ್ನ ಶೀರ್ಷಿಕೆಯಿಂದಲೇ ಬೇಂದ್ರೆಯವರ ಪ್ರೇಮ ಜಗತ್ತನ್ನು ನೆನಪಿಗೆ ತರುತ್ತದೆ. ಬೇಂದ್ರೆಯವರ ಲೋಕಕ್ಕೂ ಲಕ್ಷ್ಮಣ್‌ರಾವ್‌ರವರ ಯೌವನ ಜಗತ್ತಿಗೂ ಇರುವ ಅಂತರವೇ ಅವರ

ಕಾವ್ಯದ ಸ್ವರೂಪವನ್ನು ರೂಪಿಸಿದೆ. ಒಟ್ಟಾರೆ ಪರಂಪರೆಯನ್ನು ಒಪ್ಪಿಕೊಳ್ಳುತ್ತಲೇ ಹೊಸದನ್ನು ಸ್ವೀಕರಿಸುವ ಒಂದು ರೀತಿಯಲ್ಲಿ ಒಳ ಬಂಡಾಯದ ನೆಲೆ; ನವೋದಯದ ಯೌವನದ ಸ್ವರೂಪ. ಲಕ್ಷ್ಮಣ್‌ರಾವ್ ಯೌವನಕ್ಕೆ ಪರಂಪರೆಯ ಬಗ್ಗೆ ಆ ಬಗೆಯ ಗೌರವವಿಲ್ಲ. ಹಾಗೆಂದು ಸಂಪೂರ್ಣ ತಿರಸ್ಕರಿಸಿ ನಿಲ್ಲುವ ಶಕ್ತಿಯೂ ಇಲ್ಲ. ಇದು ನವ್ಯದ ಯೌವನಕ್ಕಿಂತಲೂ ಭಿನ್ನವಾದದ್ದು.

'ಗೋಪಿ ಮತ್ತು ಗಾಂಡಲೀನ'ದಲ್ಲಿ ಗೋಪಿಗಾದ ಅನುಭವ, ಪಾಪ ಪ್ರಜ್ಞೆ, ನೈತಿಕ ನಿಲುವುದಾಟಿ ಒಂದು ಅಸಂಬದ್ಧ ನಾಟಕೀಯ ಭಾವನೆ ಕೆರಳಿಸಲು ಕವನ ಶಕ್ತವಾಗಿದೆ. ಕವಿ ಸ್ವಭಾವತಃ ಗೋಪಿಗಿಂತಲೂ ದೊಡ್ಡ ಗಾಂಪನಾದ್ದರಿಂದ ಒಂದು ಅಸಂಬದ್ಧ ನಾಟಕೀಯ ಭಾವನೆ ಕೆರಳಿಸಲು ಕವನ ಶಕ್ತವಾಗಿದೆ. ಕವಿ ಸ್ವಭಾವತಃ ಗೋಪಿಗಿಂತಲೂ ದೊಡ್ಡ ಗಾಂಪನಾದ್ದರಿಂದ Snobbish ನಿಲುವು ತೆಗೆದುಕೊಳ್ಳುವುದಿಲ್ಲ. ಈ ಪದ್ಯದಲ್ಲಿ ಕವಿಯ ನವ್ಯತೆ ಕೇವಲ ನವ್ಯ pose ಆಗದೆ ತನ್ನತನ ತೋರಿದೆ.

ಈ ಮುಗ್ಧತೆ Snobbish ಆಗದ ನಿಲುವು, ಲವಲವಿಕೆ, ವಿನೋದ ಪ್ರಜ್ಞೆ - ಲಕ್ಷ್ಮಣ ರಾವ್‌ರವರ ಕಾವ್ಯಗಳನ್ನು ರೂಪಿಸಿರುವ, ಅವರನ್ನು ಕಾವ್ಯ ಜಗತ್ತಿನಲ್ಲಿ ವಿಶಿಷ್ಟರನ್ನಾಗಿಸಿರುವ ದ್ರವ್ಯಗಳು.

ವ್ಯಕ್ತಿಗಳಲ್ಲಿ ನಡೆಯುವ ಕೆಲವು ನೈಜ ಘಟನೆಗಳು ಕೆಲವೊಮ್ಮೆ ಕವನಗಳಾಗಿ ರೂಪುಗೊಳ್ಳುತ್ತವೆ ಇಂತಹವುಗಳನ್ನೇ ಕೆಲವೊಮ್ಮೆ ಸಾಹಿತಿಗಳು ಕಥಾ ವಸ್ತುಗಳನ್ನಾಗಿ ಆಯ್ದುಕೊಳ್ಳುತ್ತಾರೆ. ಆಯ್ದುಕೊಳ್ಳುವ ಉದ್ದೇಶವೂ ಇಷ್ಟೇ. ಸಮಕಾಲೀನ ಜನಾಂಗಕ್ಕೆ, ಜೀವನೋತ್ಸಾಹದಿಂದ ನವ್ಯೋತ್ತರ ಸಂದರ್ಭವನ್ನು ವಿಭಿನ್ನ ರೀತಿಯಲ್ಲಿ ಸಾರ್ಥಕಗೊಳಿಸಿ, ನಾವು ಬಹಿರಂಗವಾಗಿ ಒಪ್ಪಿಕೊಳ್ಳದ ಸತ್ಯಗಳನ್ನು ಹಿತವಾದ ಧಾಟಿಯಲ್ಲಿ ಹೇಳಿ, ಇವು ಚೂಟಿಯೋ, ಚುಚ್ಚಿಯೋ, ತುಂಟಾಗಿ ನಕ್ಕೋ, ತುಂಟತನವನ್ನು ವ್ಯಾಪಕವಾಗಿ ಅರ್ಥಪೂರ್ಣವಾಗಿ ಬಳಸುವ ಮೂಲಕ ಕಾವ್ಯಜಗತ್ತಿನಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿಕೊಂಡು ಬಂದಿರುವ ಸಾಹಿತಿಗಳಾಗಿದ್ದಾರೆ.

ಆಮೂರರು ಹೇಳುವಂತೆ "confessional ಸಮಾಜಾಭಿಮುಖತೆ. ಹೀಗಾಗಿ ಲಕ್ಷ್ಮಣ್‌ರಾವ್ ನವ್ಯೋತ್ತರ ಸಂದರ್ಭದಲ್ಲಿ ಅವರ ಸಮಕಾಲೀನರಿಗಿಂತ ಭಿನ್ನ ದನಿ ಯಾವ ಬಗೆಯ ಹೊರ ಒತ್ತಡಗಳಿಗೂ ಒಳಗಾಗದ ಅಂತರ್ಜಲವನ್ನೇ ನೆಮ್ಮಿದ ಅವರ ಕಾವ್ಯ ರೀತಿ ಲಕ್ಷ್ಮಣ್‌ರಾವ್‌ರವರಿಗೆ ವಿಶಿಷ್ಟವಾದುದು, ಅಧ್ಯಯನ ಯೋಗ್ಯವಾದುದು. ಸೃಜನಶೀಲ ಮನಸ್ಸು ಮಾತ್ರ ಸಮಕಾಲೀನ ಸಮಸ್ಯೆಗಳಿಗೆ, ಹೊಸ ಸವಾಲುಗಳಿಗೆ ಸಮರ್ಥವಾಗಿ ಮುಖಾಮುಖಿಯಾಗಬಲ್ಲದು. ಈ ನಂಬಿಕೆ ಈ ಹುಡುಕಾಟ ಲಕ್ಷ್ಮಣರಾವ್ ಕಾವ್ಯವನ್ನು ಜೀವಂತವಾಗಿರಿಸಿದೆ". ಆ ನಿಟ್ಟಿನಲ್ಲೇ ಕವಿತೆಗಳನ್ನು ಬರೆದಿದ್ದಾರೆ.

---

೨) ಜೀವ ಜಲ ಸಮಗ್ರಕಾವ್ಯ - ಮುನ್ನುಡಿ, ನರಹಳ್ಳಿ ಬಾಲಸುಬ್ರಹ್ಮಣ್ಯ

ಕನ್ನಡ ಗದ್ಯ ಕಥನ ಪರಂಪರೆಯಲ್ಲಿ ಒಂದು ಬಹುಮುಖ್ಯ ಸಾಂಸ್ಕೃತಿಕ ಭೇದ ಉಂಟಾದದ್ದು ನವ್ಯದ ಕಾಲದಲ್ಲಿ. ಅದುವರೆಗೆ ಅಖಂಡವಾಗಿದ್ದ ಕನ್ನಡ ಪ್ರಜ್ಞೆಯಲ್ಲಿ ಗಂಭೀರ-ಗಂಭೀರವಲ್ಲದ ಅರ್ಥಾತ್ ಜನಪ್ರಿಯ ಎಂತೆನ್ನುವ ಅಭಿವ್ಯಕ್ತಿಯ ಮತ್ತು ಗ್ರಹಿಕೆಯ ಮಾರ್ಗಗಳು ಕಾಣಿಸಿಕೊಂಡವು. "ನವ್ಯದ ಶಕ್ತಕಾರರು ತಮ್ಮ ಪ್ರತಿಭೆ ಮತ್ತು ಪ್ರಯೋಗಗಳ ಮೂಲಕ ಸಿದ್ಧಿಸಿಕೊಂಡಿದ್ದ ಅಭಿವ್ಯಕ್ತಿಯ ತಂತ್ರ ಮತ್ತು ಗಳಿಸಿಕೊಂಡಿದ್ದ ರೂಪಕ ಪ್ರತಿಮೆಗಳ ಸಂರಚನೆಯನ್ನು ಅನಾಮತ್ತಾಗಿ ಎತ್ತಿ ಬಳಸಿಕೊಂಡ, ತಮ್ಮ ಪ್ರತಿಭೆ ಮತ್ತು ಪ್ರಯೋಗಶೀಲತೆಗಳನ್ನು ಬಳಕೆಗೆ ಒಡ್ಡಿಕೊಳ್ಳದ ಕಥೆಗಾರರ ರಚನೆಗಳನ್ನು ಜನಪ್ರಿಯ ಕಥೆಗಳೆಂದು ಗುರುತಿಸಲಾಗಿರುವುದನ್ನು ವಿಮರ್ಶಕರು ಸೂಚಿಸುತ್ತಾರೆ (ಡಾ. ಗಿರಡ್ಡಿ ಗೋವಿಂದರಾಜು). ಅಂದರೆ, ಮುಖ್ಯವಾಗಿ ಅಭಿವ್ಯಕ್ತಿಯ ಅಪ್ರಾಮಾಣಿಕತೆಯಲ್ಲಿ ನಾವು ಕನ್ನಡದ ಜನಪ್ರಿಯ ಕಥೆ ಕಾದಂಬರಿಗಳ ಮೂಲವನ್ನು ಗುರುತಿಸುತ್ತೇವೆ.

ಕನ್ನಡ ಕಾವ್ಯದ ನೆಲೆಯಲ್ಲಿ ಇಂಥ ಸಾಂಸ್ಕೃತಿಕ ಭೇದ ಸಂಘಟಿಸಿದ್ದು ನವ್ಯದ ನಂತರದ ಬಂಡಾಯದ ಕಾಲದಲ್ಲಿ. ಗದ್ಯ ಕಥನದಲ್ಲಿ ಅಭಿವ್ಯಕ್ತಿಯ ಅಪ್ರಾಮಾಣಿಕತೆಯಲ್ಲಿ ಜನಪ್ರಿಯತೆಯ ಬೀಜವಿದ್ದರೆ, ಕಾವ್ಯದಲ್ಲಿ ಇದು ಒಡಮೂಡಿದ್ದು ವಸ್ತು ಧೋರಣೆಗಳ ಬಗೆಗಿನ ಅಪ್ರಾಮಾಣಿಕತೆಯಲ್ಲಿ ಮೊಟ್ಟ ಮೊದಲ ಬಾರಿಗೆ ಕಾವ್ಯದ ವಸ್ತುವಿನ ಬಗೆಗೆ, ಕಾವ್ಯವು ಮಂಡಿಸುವ ಧೋರಣಾತ್ಮಕ ಗ್ರಹಿಕೆಯ ಬಗೆಗೆ ಒಂದು ಆಯ್ಕೆಯ ವಿನ್ಯಾಸ ಮಂಡಿತವಾಯಿತು. ತಾನು ಇಂದಿನ ವಿನ್ಯಾಸದ ಧೋರಣೆ ಮತ್ತು ವಸ್ತುವನ್ನು ಆಯ್ಕೆ ಮಾಡಿಕೊಳ್ಳಬೇಕೆನ್ನುವ ಒಂದು ಮನೋಭಾವವನ್ನು ಯುವಕವಿಗಳು ಬೆಳೆಸಿಕೊಂಡರು.

ಒಂದು ನಿರ್ದಿಷ್ಟ ಧೋರಣೆಯ ವಿನ್ಯಾಸವನ್ನು ಗ್ರಹಿಸಿದ ಕೆಲವು ಹಿರಿಯ ಕವಿಗಳು 'ಹೂವು ಹೆಣ್ಣು-ತಾರೆಗಳ ಬಗೆಗೆ ಕವಿತೆ ಬರೆಯುವುದು ಬೇಡ ಗೆಳೆಯ' ಎನ್ನುತ್ತ ನುಡಿದ ವ್ಯಂಗ್ಯಾತ್ಮಕವಾದ ಮೆಲು ನುಡಿಯನ್ನು ಈ ಹೊಸ ಕವಿಗಳು ವಾಚ್ಯವಾಗಿ ಸ್ವೀಕರಿಸಿದರು.

ಅನುಭವದ ಮೂಸೆಯಲ್ಲಿ ಬೆಂದು ಹೊರಹೊಮ್ಮಿದ ಸಿದ್ಧಲಿಂಗಯ್ಯನಂತಹ ಕವಿಯ 'ಇಕ್ರಲಾ ಒದೀರ್ಲಾ.....' ಎನ್ನುವಂತಹ ಕಾವ್ಯದ ಹಿಂದಿರುವ ಅನುಭವ ಪ್ರಾಮಾಣಿಕತೆಯನ್ನು ಗ್ರಹಿಸಿದೆ. ಈ ಕವಿಗಳು ಅದರಲ್ಲಿ ವೈಯಕ್ತವಾದ ಆಕ್ರೋಶವನ್ನು ಸಿದ್ಧ ವಸ್ತುವಾಗಿ ತೆಗೆದುಕೊಂಡರು. ಸಾಮಾಜಿಕ, ರಾಜಕೀಯ ಘೋಷಣೆಗಳನ್ನು ಕಾವ್ಯ ವಸ್ತುವಾಗಿ ಸ್ವೀಕರಿಸಿದರು. ನವ್ಯವು 'ಅನುಭವ ಪ್ರಾಮಾಣಿಕತೆ ಎನ್ನುವ ಯಾವ ತತ್ವವನ್ನು ಮೂಲಮಂತ್ರವಾಗಿ ಸ್ವೀಕರಿಸಿದರೊ. ಅದು ಈಗ ವಸ್ತು, ಧೋರಣೆಗಳ ಸಾರಾಸಗಟು ಅನಾಮತ್ತಾದ ಸ್ವೀಕರಣದ ನೆಲೆಯಲ್ಲಿ ಹಿಂದಕ್ಕೆ ಸರಿಯಿತು. ಅಂತರಂಗದ ಪಿಸುದನಿ ಗದ್ದಲದ ಘೋಷಣೆಗಳ ನಡುವೆ ಸಿಕ್ಕಿಹಾಕಿಕೊಂಡು ತಬ್ಬಿಬ್ಬಾಯಿತು. ನಿರ್ದಿಷ್ಟ ಧೋರಣೆಯ ವಿನ್ಯಾಸಕ್ಕೆ ಸಲ್ಲುವ ಸಲುವಾಗಿ ಸ್ಥೂಲವಾದ ಕಪ್ಪು ಬಿಳುಪಿನ ದ್ವಂದ್ವ ಮಾಸಿದ ಗ್ರಹಿಕೆಯೊಂದೇ ಸತ್ಯವೆನ್ನುವ ನಿಲುವು ಪ್ರಸ್ತಾಪಗೊಂಡು, ಅನುಭವದ ಪ್ರಾಮಾಣಿಕತೆಯಿಂದ ಪ್ರಸ್ತಾವಗೊಳ್ಳುತ್ತ ಹೋಯಿತು. ಕಾವ್ಯದಲ್ಲಿ ಹೀಗೆ ನೆಲೆಗೊಳ್ಳಗೊಡಗಿದ ಇಂಥ ಅಪಾಯವನ್ನು ಗ್ರಹಿಸಿದ ಎಸ್.ಜಿ.ಸಿದ್ಧರಾಮಯ್ಯ ಮತ್ತು ಕೆ.ಬಿ.ಸಿದ್ಧಯ್ಯನಂತಹ ಕವಿಗಳು ಅಧ್ಯಾತ್ಮ ಅವದೂತತನ ಮತ್ತು ಜನಾಂಗೀಯ ಪುರಾಣಗಳ ದೇಸೀಯ ನೆಲೆಯಲ್ಲಿ ನಿಜಬಂಡಾಯದ ಆವರಣವನ್ನು ಕಂಡು, ಸೃಷ್ಟಿಸಿಕೊಂಡು ತಮ್ಮನ್ನು ತಾವು ರಕ್ಷಿಸಿಕೊಂಡರು.

---

೩) ಡಾ. ಗಿರಡ್ಡಿ ಗೋವಿಂದರಾಜು

ನವ್ಯದ ನಂತರದಲ್ಲಿ ಈ ಮೇಲೆ ಹೇಳಿದ ಲಕ್ಷಣಗಳ ಜನಪ್ರಿಯತೆಯ ಒಂದು ನೆಲೆ ಕಟ್ಟಿಕೊಳ್ಳುತ್ತಿದ್ದರೆ, ಇದೇ ಕಾಲಘಟ್ಟದಲ್ಲಿ ಕಟ್ಟಿಕೊಳ್ಳುತ್ತಿದ್ದ ಇನ್ನೊಂದು ಕಾವ್ಯಮಾರ್ಗವನ್ನು ನವ್ಯದ ಅಹಂಕಾರವು 'ಜನಪ್ರಿಯ' ಎಂದು ಜರಿಯಿತು. ನವ್ಯೋತ್ತರ ಎಂದು ಗುರುತಿಸಬಹುದಾದ ಈ ಕಾವ್ಯಮಾರ್ಗವು ನವ್ಯದ ಅನೇಕ ಉತ್ತಮಾಂಶಗಳನ್ನು ಉಳಿಸಿಕೊಳ್ಳುತ್ತಲೇ ಅದರ ಮಡಿವಂತಿಕೆಯ ಮನೋಭಾವವನ್ನು ತಿರಸ್ಕರಿಸದಂತಹುದು. ಈ ಮಾರ್ಗದ ಕವಿಗಳು ಕಾವ್ಯದ ಸಂವಹನಶೀಲತೆಗೆ ಪೂರಕವಾಗಬಹುದಾದ ಛಂದಸ್ಸಿನ ಪ್ರಯೋಗಗಳು, ಗೇಯತೆ, ಕಥನಾಂಶ ಮುಂತಾದ ಅಂಶಗಳನ್ನು ಸ್ವಾಗತಿಸಿದವರು. ಇವರು ಒಂದಿಷ್ಟು ಹಾಡುಗಳನ್ನು ಬರೆದು ಅವು ಕ್ಯಾಸೆಟ್ಟುಗಳ ಮೂಲಕ ಜನಪ್ರಿಯಗೊಂಡ ಕಾರಣವಾಗಿ ಈ ಕವಿಗಳನ್ನು ಕ್ಯಾಸೆಟ್ ಕವಿಗಳೆಂದು ಲೇವಡಿ ಮಾಡಿದರು.

ಅದೇನೇ ಇರಲಿ, ಹೀಗೆ ಕ್ಯಾಸೆಟ್ ಕವಿಗಳೆಂದು ಲೇವಡಿಗೆ ಒಳಗಾದ ಕವಿಗಳು ಬರೆದದ್ದು ಕೇವಲ ಹಾಡುಗಳನ್ನಷ್ಟೇ ಅಲ್ಲ. ಅವರು ಬರೆದ ಹಾಡುಗಳಲ್ಲಿ ಅನೇಕವು ಉತ್ತಮ ಕಾವ್ಯದ ಪರಿಧಿಗೆ ಸಲ್ಲುತ್ತವೆ. ಇನ್ನು ಈ ಹಾಡುಗಳಾಚೆ ಅವರು ಬರೆದ ಬೇರೆ ರೀತಿಯ ಕಾವ್ಯ ಸಮೃದ್ಧವಾಗಿದೆ. ಮತ್ತು ಆ ಕಾವ್ಯವು ಸಂವಹನದ ಸುಭಗತೆಯನ್ನು ತೋರುವಂತಹದ್ದಾಗಿದೆ.

ಬಹುಶಃ ನವ್ಯದ ಅಹಂಕಾರವು ಸಂವಹನದ ಸುಭಗತೆಯ ಅಂಶದ ಬಗೆಗೆ ಒಂದು ರೀತಿಯ ಅನುಮಾನವನ್ನೂ ಸಿನಿಕತೆಯನ್ನೂ ತಾಳಿದಂತೆ ಕಾಣುತ್ತದೆ. ಕಾವ್ಯವು 'ಶಬ್ದಸುಖ'ವನ್ನು ಮಾತ್ರ ನೆಚ್ಚಿಕೊಂಡು ಸಂಗೀತದ ಸಖ್ಯವನ್ನು ತಿರಸ್ಕರಿಸಬೇಕೆನ್ನುವ ನಿಲುವು ಇಲ್ಲಿಯದು. ಆದರೆ ಯಾವುದೇ ಭಾಷೆ ಸಂಗೀತದ ಹೊರತಾಗಿ ಇರಬಲ್ಲುದೆ? ಶಬ್ದ ಸುಖದ ಪರಿಕಲ್ಪನೆ ಸಾಹಿತ್ಯ ಭಾಷೆಯೊಳಗೆ ಅಡಗಿದ ಸಂಗೀತದ ಮೂಲದಿಂದಲೇ ಹೊರ ಹೊಮ್ಮುವಂತಹದ್ದು ಅಲ್ಲವೆ? ಇರಲಿ, ಜೊತೆಗೆ ಕಾವ್ಯವು ಕಥನಾಂಶಗಳನ್ನು ತಿರಸ್ಕರಿಸಬೇಕೆಂದು ಈ ನಿಲುವು ಪ್ರತಿಪಾದಿಸುತ್ತದೆ.

ನವ್ಯದ ಇಂತಹ ನಿಲುವಿಗೆ ಕಾರಣವಾಗಿರುವ ಪ್ರಮುಖವಾದ ಸಂಗತಿ ಎಂದರೆ ಅದರ ಅಂತರ್ಮುಖೀ ಗ್ರಹಿಕೆ. ಕಾವ್ಯದ ಹುಟ್ಟು ಮತ್ತು ಅದರ ಸಾರ್ಥಕತೆ ಆದ್ಯಂತವಾಗಿ ನೆಲೆಸಿರುವುದು ಅಂತರ್ಮುಖೀ ವೈಯಕ್ತಿಕತೆಯಲ್ಲಿ. ಆದರೆ ನವ್ಯೋತ್ತರವು ಈ ತತ್ವವನ್ನು ತಿರಸ್ಕರಿಸುತ್ತದೆ. ಕಾವ್ಯದ ಹುಟ್ಟು ವೈಯಕ್ತಿಕ ಅಂತರ್ಮುಖತೆಯ ನೆಲೆಯಲ್ಲಾದರೂ ಅದರ ಸಾರ್ಥಕ್ಯ ಇರುವುದು ಕವಿಯ ಆಚೆಗಿನ ಸಮುದಾಯದ ನೆಲೆಯಲ್ಲಿ. ಅಂತಲೇ ನವ್ಯೋತ್ತರ ಕಾವ್ಯವು ಕಾವ್ಯದ ಪಾರಂಪರಿಕ ಪರಿಕರಗಳನ್ನು ನಿರ್ಭಿಡೆಯಿಂದ ಬಳಸಿಕೊಳ್ಳುತ್ತ ಸಮುದಾಯದೊಂದಿಗೆ ಪರಿಚಿತತೆಯ ಮೂಲಕ ಸಂವಹನದ ಸಂಬಂಧವನ್ನು ಸಾಧಿಸಿಕೊಳ್ಳತೊಡಗಿತು. ಅಪರಿಚಯದ ಮೂಲಕ ಪರಾಙ್ಮುಖತೆಯನ್ನು ಗಳಿಸಿಕೊಂಡಿದ್ದ ನವ್ಯದ ಮಾರ್ಗದಿಂದ ಹೊರತಾದ ದಿಕ್ಕಿನಲ್ಲಿ ನಡೆಯತೊಡಗಿತು.

## ವ್ಯಾಪ್ತಿ

ಬಿ.ಆರ್.ಲಕ್ಷ್ಮಣ್‌ರಾವ್‌ರವರ ಹೆಸರು ಕನ್ನಡ ಕಾವ್ಯ ರಸಿಕರಿಗೆ ತುಂಬ ಪರಿಚಿತವಾದ ಹೆಸರು. ೧೯೭೧ರಲ್ಲಿ ಪ್ರಕಟವಾದ ತಮ್ಮ ಮೊದಲ ಸಂಗ್ರಹ ಗೋಪಿ ಮತ್ತು ಗಾಂಡಲೀನದಲ್ಲಿಯೇ ಅವರು ಸ್ವಂತದ ದನಿಯನ್ನು ಕಂಡು ಕೊಂಡರಲ್ಲದೆ ಕಾವ್ಯ ರಚನೆಯಲ್ಲಿ ಸಾಕಷ್ಟು ಪರಿಣತಿಯನ್ನು ಸಾಧಿಸಿದರು. ನಂತರ ಬಂದ ಟುವಟಾರ(೧೯೭೭), ಲಿಲ್ಲಿಪುಟ್ಟಿಯ ಹಂಬಲ (೧೯೮೧) ಮತ್ತು ಶಾಂಗ್ರಿ–ಲಾ

(೧೯೭೭) ಇವರ ಕವಿತೆಗಳ ಮಹತ್ವ ತಿಳಿಸುತ್ತವೆ. ಅವರ ಪ್ರೇಮಗೀತೆಗಳು ಮತ್ತು ಹನಿಗವನಗಳು ಮನಮುಟ್ಟುವಂತಿವೆ. ಆದರೂ ಅವರ ಕಾವ್ಯಕ್ಕೆ ನ್ಯಾಯವಾಗಿ ದೊರಕಬೇಕಾದ ಸ್ಥಾನ ಗೌರವಗಳು ಇದುವರೆಗೆ ದೊರೆತಿಲ್ಲ ಎಂದೇ ಹೇಳಬೇಕಾಗುತ್ತದೆ. ಆದ್ದರಿಂದ ಲಕ್ಷ್ಮಣ್‌ರಾವ್‌ರವರ ನಾಲ್ಕು ಕವನ ಸಂಕಲನಗಳನ್ನು ನನ್ನ ಸಂಶೋಧನೆಯ ಅಧ್ಯಯನಕ್ಕೆ ಒಳಪಡಿಸಿಕೊಂಡಿದ್ದೇನೆ.

**೧) ಟುವಟಾರ (೧೯೭೮)**

ಲಕ್ಷ್ಮಣ್‌ರಾವ್ ಅಧೀನ ಸಂಸ್ಕೃತಿಯ ಸ್ಥಿತಿಯನ್ನು ತಮ್ಮ 'ಟುವಟಾರ' ಕವಿತೆಯಲ್ಲಿ ಸಮರ್ಥವಾಗಿ ವ್ಯಾಖ್ಯಾನಿಸಿದ್ದಾರೆ. ಟುವಟಾರ ನ್ಯೂಜಿಲೆಂಡಿನ ಕೆಲವು ದ್ವೀಪಗಳಲ್ಲಿರುವ ಒಂದು ಸರೀಸೃಪ. ಪರಂಪರೆಯ ಈ ಪ್ರಾಣಿಯ ಬಗ್ಗೆ ಜನರಿಗೆ ಅಪಾರ ಗೌರವ, ಭಯ, ನ್ಯೂಜಿಲೆಂಡಿನ ಆದಿವಾಸಿಗಳ ಪುರಾಣದಂತೆ ಟುವಟಾರ ಒಬ್ಬ ಅಗ್ನಿದೇವತೆ. ಆಳುವ ಸಂಸ್ಕೃತಿ ಅಧೀನ ಸಂಸ್ಕೃತಿಯನ್ನು ವ್ಯವಸ್ಥಿತವಾಗಿ ನಾಶ ಮಾಡುತ್ತದೆ. ತನ್ನ ಪರಂಪರೆಯ ಬಗ್ಗೆ ಇತಿಹಾಸದ ಬಗ್ಗೆ ಅವಜ್ಞತೆ ಅಸಹನೆ ಬೆಳೆಸುತ್ತದೆ. ಪರಿಣಾಮವಾಗಿ ತನ್ನನ್ನು ಒಪ್ಪಿಕೊಳ್ಳುವ, ಗೌರವಿಸುವ ಸ್ಥಿತಿ ನಿರ್ಮಾಣ ಮಾಡುತ್ತದೆ.

**೨) ಗೋಪಿ ಮತ್ತು ಗಾಂಡಲೀನ (೧೯೭೧)**

ಗೋಪಿ ಮತ್ತು ಗಾಂಡಲೀನದಲ್ಲಿ :- ಗೋಪಿಗಾದ ಅನುಭವ ಪಾಪಪ್ರಜ್ಞೆ ನೈತಿಕ ನಿಲುವು ದಾಟಿ ಒಂದು ಅಸಂಬದ್ಧ ನಾಟಕೀಯ ಭಾವನೆ ಕೆರಳಿಸಲು ಕವನ ಶಕ್ತವಾಗಿದೆ. ಕವಿ ಸ್ವಭಾವತಃ ಗೋಪಿಗಿಂತಲೂ ದೊಡ್ಡ ಗಾಂಪನಾದ್ದರಿಂದ snobbish ನಿಲುವು ತೆಗೆದುಕೊಳ್ಳುವುದಿಲ್ಲ.

ಈ ಸಂಕಲನದಲ್ಲಿ ಬರುವ ಅಮ್ಮ, ಪ್ರೇಮಗೀಮ ಸಖೀಗೀತ ಫೋಟೋಗ್ರಾಫರ್, ವಾಸಂತಿ, ಗೆಳೆಯರು ಮುಂತಾದ ಕವಿತೆಗಳಲ್ಲಿಯೇ ಕಲಾವಿದನ ಎಲ್ಲಾ ಲಕ್ಷಣಗಳನ್ನು ಪ್ರಕಟಿಸಿದರು. ಇವರು ಲವಲವಿಕೆಯಿಂದ ಉತ್ಸಾಹದಿಂದ ಜೀವಂತ ಕಾವ್ಯ ರಚಿಸಿ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ರೂಪಿಸಿಕೊಂಡು ಕಾವ್ಯ ರಚಿಸಿದ್ದಾರೆ.

**೩. ಲಿಲ್ಲಿಪುಟ್ಟಿಯ ಹಂಬಲ(೧೯೮೧)**

ಇಡೀ ಕವಿತೆಯ ವಿನ್ಯಾಸವನ್ನು ರೂಪಿಸುವುದು ನಾಚಿಕೆಯ ಸ್ಥಾಯಿಭಾವ. ಅಕ್ಷರ ಲೋಕದ ಸವಲತ್ತು ಪಡೆದ ಶೋಷಕ ಜನಾಂಗಕ್ಕೆ ಸೇರಿದ ಕವಿಗೆ ಅಕ್ಷರ ವಂಚಿತ ಸಮುದಾಯದ ಜೊತೆ ಅರ್ಥಪೂರ್ಣ ಸಂಬಂಧ ಸೃಷ್ಟಿಸಿಕೊಳ್ಳಲು ಇದಕ್ಕಿಂತ ಅನ್ಯಮಾರ್ಗ ಬೇರಿಲ್ಲ. ಇವರ ಕಾವ್ಯದ ಕೇವಲ ತೋರುಗಾಣಿಕೆಯ ಪ್ರದರ್ಶನದ, ತೀಟೆ ತೀರಿಸಿಕೊಳ್ಳುವ ಮಾತುಗಳಾಗದೆ ಕವಿಯನ್ನು ಕಾಡುವ ಒಳದನಿಯಾಗಿ ಅಭಿವ್ಯಕ್ತಿ ಪಡೆಯುತ್ತದೆ. ಇವರ ಕಾವ್ಯಗಳಲ್ಲಿ ಸಾಮಾಜಿಕ ಸಮಸ್ಯೆ ಕಾವ್ಯಾಭಿವ್ಯಕ್ತಿಯ ಸಮಸ್ಯೆಯೂ ಆಗಿ ಬಿಡುತ್ತದೆ.

ಕನ್ನಡ ಕಾವ್ಯ ಮೀಮಾಂಸೆಯ ಚರ್ಚೆಯ ಸಂದರ್ಭದಲ್ಲಿ ಲಕ್ಷ್ಮಣ್‌ರಾವ್ ಅವರ ಅಭಿವ್ಯಕ್ತಿಯ ಹುಡುಕಾಟದ ಸಮಸ್ಯೆ ಮಹತ್ವ ಒಂದು ಭಾಗವಾಗಬಲ್ಲುದು. ಈ ನೆಲೆಯಲ್ಲಿಯೇ ಅನಂತಮೂರ್ತಿಯವರು ಗುರುತಿಸುವಂತೆ ಲಕ್ಷ್ಮಣ್‌ರಾವ್ ಕಾವ್ಯ "ನಾವು ಬಹಿರಂಗವಾಗಿ ಒಪ್ಪಿಕೊಳ್ಳದ ಸತ್ಯಗಳನ್ನು ಹಿತವಾದ ಧಾಟಿಯಲ್ಲಿ ಹೇಳಿಬಿಡಬಲ್ಲುದು" ಸಾಮಾಜಿಕವಾಗಿ ನಾವು ಒಪ್ಪಿಕೊಳ್ಳದ ಖಾಸಗಿ ಸತ್ಯಗಳನ್ನು ಗುರ್ತಿಸಲು ನಮಗೆ ಕಲಿಸುವ ಇಂಥ ಪದ್ಯಗಳು ನಿಜಕ್ಕೂ ಚೂಪಾದ ಗುಂಡು ಸೂಜಿಗಳಿದ್ದಂತೆ ಇವು ಚೂಟಿಯೋ, ಚುಚ್ಚಿಯೋ, ತುಂಟಾಗಿ ನಕ್ಕೋ ನಮ್ಮ ಸಂಸ್ಕೃತಿಯ ಜಾಡ್ಯಗಳಲ್ಲಿ ಒಂದಾದ ಊದಿಕೊಳ್ಳುವ Egotistical sublime ಗೆ ನಿಧಾನವಾಗುತ್ತವೆ.

ಕವಿಯ ಲವಲವಿಕೆಯು, ವಿನೋದ ಪ್ರಜ್ಞೆಯ ಲಯವನ್ನುಳಿಸಿಕೊಳ್ಳುತ್ತಲೇ ವಿಷಾದದ ದನಿಯೊಂದು ಅದರಲ್ಲಿ ಸೇರಿಕೊಳ್ಳುತ್ತದೆ. ಮುಕ್ತ ಮನೋಭಾವದ ತೋರುಗಾಣಿಕೆಯಿಂದ ಕವಿಯ ದನಿಯನ್ನು ಪಾರುಮಾಡುವ ಶಕ್ತಿ ನೀಡುತ್ತದೆ.

<u>೪ ಶಾಂಗ್ರಿ-ಲಾ(೧೯೭೭)</u>

ಕವಿತೆ ಎಂಬ ಕವಿತೆಯಲ್ಲಿಯೇ ಎಲ್ಲ ಮಡಿವಂತಿಕೆಗಳನ್ನೂ ಮೀರಿ ಸೃಷ್ಟಿಯ ಚೆಲುವನ್ನು ಆಸ್ವಾದಿಸುವ ಮನೋಭಾವವನ್ನು ಬೆಳೆಸಿಕೊಳ್ಳುವ ಹಂಬಲ ವ್ಯಕ್ತವಾಗುತ್ತದೆ. ಗಾಂಡಲೀನಳ ಜಗತ್ತಿಗಿಂತ ಭಿನ್ನವಾದ ನೆಲೆಯಿದು; ಮಾಗುತ್ತಿರುವ ಬಗೆಯಿದು. ಇದು ಹೆಚ್ಚು ಕಲಾತ್ಮಕವಾಗಿ ವ್ಯಕ್ತವಾಗುವುದು 'ಗುಂಡಪ್ಪ ವಿಶ್ವನಾಥ್' ಅಂತಹ ಕವಿತೆಯಲ್ಲಿ, ಇಂಥ ಪ್ರತಿಭೆ, ಭೋಗ, ಪ್ರಸಿದ್ಧಿ, ಅಹಂ, ಲಂಪಟತನ-ತನ್ನ ಕಾಂತಿ ಕಳೆದುಕೊಳ್ಳುವ ದುರಂತ ಕವಿತೆಯ ಎರಡನೆಯ ಹಂತ.

<u>೫. ಅಪರಾಧಂಗಳ ಮನ್ನಿಸೊ (೧೯೨)</u>

ಲಕ್ಷ್ಮಣರಾವ್ ಶೋಧಿಸುವ ರಹಸ್ಯಗಳೆಲ್ಲ ಸಾಮಾನ್ಯ ಜೀವನದ ರಹಸ್ಯಗಳೇ. ಅವರ ಪ್ರಪಂಚವೇ 'ಅಶೂರ'ರದು. ಹೀಗಾಗಿ ಸೋಲು ಸಹಜವಾಗಿಯೇ ಅವರ ಆಸ್ಥೆಯ ವಿಷಯವಾಗುತ್ತದೆ. ಸೋಲು, 'ಸೆಮಿಫೈನಲ್ ಉದ್ಗಾರಗಳು' ಕವಿತೆಯಲ್ಲಿದ್ದಂತೆ ಕ್ರಿಕೆಟ್ಟಿನಲ್ಲಾಗಿರಬಹುದು ಅಥವಾ ವ್ಯಾಪ್ತಿಯಲ್ಲಿದ್ದಂತೆ ಪ್ರೀತಿಯ ಸಂಬಂಧಗಳಲ್ಲಿರಬಹುದು.

ಸೋಲುಗಳನ್ನು ಮೀರಿಯೂ ಸಾಮಾನ್ಯ ಜೀವನದಲ್ಲಿ 'ಅದ್ಭುತ'ಗಳು ಜರುಗುತ್ತಲೇ ಇರುತ್ತವೆ. ಈ ಅದ್ಭುತಗಳನ್ನು ಜಾಗರೂಕತೆಯಿಂದ ಲಕ್ಷ್ಮಣರಾವ್ ದಾಖಲಿಸುವುದನ್ನು ಅವರ ಕಾವ್ಯಗಳಿಂದ ತಿಳಿಯಬಹುದು.

---

೪) "ನನ್ನಗೀತೆ" ಬಿ.ಆರ್.ಲಕ್ಷ್ಮಣರಾವ್, ಬೆನ್ನುಡಿ, ಎಚ್.ಎಸ್. ವೆಂಕಟೇಶ ಮೂರ್ತಿ

### ೬. ಎಡೆ – (೧೯೯೮)

ಇದರಲ್ಲಿ ಲಕ್ಷ್ಮಣರಾವ್‌ರವರು ಬಳಸುವ ಪ್ರಾಸ ಪದಗಳನ್ನು ಮಾತ್ರ ಆಯ್ದು ಓದಿಕೊಂಡರೆ ಕವಿ ಹೇಳುವ ಸ್ಪಷ್ಟ ಅರ್ಥಕ್ಕೂ ಇವರು ಗುಟ್ಟಾಗಿ ಬಯಸುವ ಸಂಕೀರ್ಣತೆಗೂ ಇರುವ ವಿರೋಧ ಕಾಣುತ್ತದೆ. ಅಮ್ಮನಿಗೆ ಕವಿತೆಯಲ್ಲಿನ ಪ್ರಾಸ, ಅಮ್ಮನಿಗೆ ಸಾತ್ವನ ಹೇಳುವಂತಿದ್ದರೂ ಅಲ್ಲಿನ ಪ್ರಾಸ, ಒಳಪ್ರಾಸಗಳನ್ನು ಗಮನಿಸಿದರೆ ಕ್ರೌರ್ಯ, ಅಸಹನೆಗಳೂ ಇವೆ ಎನ್ನುವ ಅನುಮಾನ ಮೂಡುತ್ತದೆ. ಲಕ್ಷ್ಮಣರಾವ್ ಕವಿತೆಗಳಲ್ಲಿ ಅಮ್ಮನಿಗಿಂತ ಲೋಲಿಟಗಳೇ ವಿಜೃಂಭಿಸಿ ರಮಿಸುತ್ತಾರೆ.

### ೭) ಇವಳು ನದಿಯಲ್ಲ – ೨೦೦೩

ಲಕ್ಷ್ಮಣರಾವ್ ಕಾವ್ಯದ ಸೊಗಸು ಇರುವುದು ಅವರ ಜೀವಂತಿಕೆಯಲ್ಲಿ, ಅದರ ಚಿರ ಯೌವನದಲ್ಲಿ. ಕವಿಗೆ ವಯಸ್ಸಾದರೂ ಅವರ ಕಾವ್ಯಕ್ಕೆ ಮುಪ್ಪು ತಗುಲಬೇಕಿಲ್ಲ. ಇಡೀ ಸಂಕಲನದ ಕವಿತೆಗಳೂ ಜೀವಂತಿಕೆಯಿಂದ ಮಿಡಿಯುತ್ತಿದ್ದು ಅವು ತಮ್ಮ ವೈಯಕ್ತಿಕ ವಯೋಮಾನವನ್ನು ಬಿಂಬಿಸುತ್ತಾ ಆಯಾ ವಯೋಮಾನಕ್ಕೆ ತಕ್ಕುದಾದ ಮುಗ್ಧತೆ ಮತ್ತು ತಿಳುವಳಿಕೆಗಳನ್ನು ಬಿಂಬಿಸುತ್ತವೆ.

### ೮) ಸುಬ್ಬಾಭಟ್ಟರ ಮಗಳೇ(ಭಾವಗೀತೆಗಳು) ೨೦೦೫

ಸಾಮಾನ್ಯವಾಗಿ ಗೀತೆಗಳಿಗೆ ಭಾವಜಗತ್ತೇ ಕೇಂದ್ರ. ಹೀಗಾಗಿಯೇ ರಮ್ಯತೆ ಅದರ ಲಯವನ್ನು ರೂಪಿಸುತ್ತದೆ. ಲಕ್ಷ್ಮಣ್‌ರಾವ್ ಅವರಿಗೆ ಇದರ ಅರಿವಿದೆ. ಆದ್ದರಿಂದಲೇ ಎಚ್ಚರದಿಂದಲೇ ಗೀತ ಜಗತ್ತನ್ನು ವಿಸ್ತಾರಗೊಳಿಸುವ ದೈನಿಕದ ಕೋಟಲೆಗಳನ್ನೂ ಅದು ಒಳಗೊಳ್ಳುವಂತೆ ಮಾಡುವ ಪ್ರಯತ್ನವನ್ನು ಅವರು ತಮ್ಮ ಗೀತೆಗಳಲ್ಲಿ ಮಾಡಿದ್ದಾರೆ.

ಬಿ.ಆರ್.ಎಲ್. ನವ್ಯ ಸಂದರ್ಭದಲ್ಲಿ ಕಾವ್ಯ ಜಗತ್ತನ್ನು ಪ್ರವೇಶಿಸಿದಂತವರು. ಆದರೆ ನವ್ಯರ ಸಿನಿಕತನ, ಹತಾಶೆ, ಅನಾಥಪ್ರಜ್ಞೆ ಅವರನ್ನು ಕಾಡಿಲ್ಲ. ಬದಲಾಗಿ ಬದುಕಿನ ಬಗ್ಗೆ ಉತ್ಕಟ ಪ್ರೀತಿ, ನಂಬಿಕೆ, ಸಮುದಾಯದೊಂದಿಗೆ ಒಂದಾಗುವ ಅಭೀಪ್ಸೆ ಅವರಲ್ಲಿ ದಟ್ಟವಾಗಿ ಕಾಣಿಸುತ್ತದೆ. ನವ್ಯದ ಪ್ರಭಾವದ ಪ್ರಭೆಯಿಂದಾಗಿ ರಮ್ಯ ಕಾವ್ಯಮಾರ್ಗಕ್ಕೆ ಸಹಜವಾಗಿದ್ದ ಕನಸುಗಾರಿಕೆ, ಆದರ್ಶ ಇವುಗಳಿಂದಲೂ ಬಿ.ಆರ್.ಎಲ್. ದೂರವಾಗಲು ಸಾಧ್ಯವಾಯಿತು.

ಕಟುವಾಸ್ತವ ಪ್ರಜ್ಞೆ, ಸಮಕಾಲೀನ ಸಾಮಾಜಿಕ ಸವಾಲುಗಳ ಅರಿವು ಅವರ ಗೀತೆಗಳ ಸ್ವರೂಪವನ್ನು ರೂಪಿಸಿವೆ. ಹೀಗಾಗಿಯೇ ನವ್ಯ–ನವೋದಯ ಎರಡೂ ಮಾರ್ಗಗಳಿಗಿಂತ ಭಿನ್ನ ರೀತಿಯ ಕಾವ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ಅವರಿಗೆ ಸಾಧ್ಯವಾಯಿತು.

ಕೆ.ಎಸ್.ನರಸಿಂಹಸ್ವಾಮಿಯವರಂತೆ ಬಿ.ಆರ್.ಎಲ್ ಸಹ ಮಧ್ಯಮವರ್ಗದ ಅಂತರಂಗದ ದನಿಯಾಗಿ ಕಾಣಿಸಿದರೂ ಕೆ.ಎಸ್.ನರಸಿಂಹಸ್ವಾಮಿಗಿಂತ ಬಿ.ಆರ್.ಎಲ್. ಸಂಪೂರ್ಣ ಭಿನ್ನ. ಕೆ.ಎಸ್.ನ ಅವರಲ್ಲಿ ವಿಷಾದವಿದೆ. ಒಪ್ಪಿ ಸ್ವೀಕರಿಸುವ ಸಮಾಧಾನದ ನಿಲುವಿದೆ. ಲಕ್ಷ್ಮಣ್‌ರಾವ್‌ರವರಲ್ಲಿ ಸೂಕ್ಷ್ಮ ವ್ಯಂಗ್ಯವಿದೆ. ತೆಳು ಹಾಸ್ಯದ ಲೇವಡಿಯಿದೆ. 'ಸುಬ್ಬಾಭಟ್ಟರ ಮಗಳೇ' ಅಂತಹ ಗೀತೆ ಇದಕ್ಕೆ ಅತ್ಯುತ್ತಮ

ನಿದರ್ಶನ. ಸಾಧನ ಅಗ್ನಿಗೆ ಬೇರು ಕಾಮಧೇನು, ಮೂಢನಂಬಿಕೆ, ಸ್ವಾತಂತ್ರ್ಯ, ಮಹಿಮೆ, ಗುಮ್ಮ, ಬೇಸಿಗೆ, ಮಾಯಾದೀಪ, ಕಾಲ, ಅಮ್ಮ ಫಸ್ಕಿ, ಗೆಳೆಯರು, ವಿಷಾದ, ಸಹನೆ, ಮರವಾಗು, ಮೊದಲಾದ ಗೀತೆಗಳಲ್ಲಿ ನಾವು ಕಾಣುವ ವೈವಿಧ್ಯ, ವಿಸ್ತಾರ, ಲಕ್ಷ್ಮಣ್‌ರಾವ್ ಗೀತ ಜಗತ್ತು ಒಳಗೊಳ್ಳುವ ಅನುಭವ ಪ್ರಪಂಚದ ವ್ಯಾಪ್ತಿಯನ್ನು ಸೂಚಿಸುತ್ತದೆ.

ಇದೇ ಬಗೆಯ ವಿಸ್ತಾರ, ವೈವಿಧ್ಯವನ್ನು ನಾವು ಲಕ್ಷ್ಮಣ್‌ರಾವ್ ಅವರಿಗೆ ಪ್ರಿಯವಾದ ಅವರ ಪ್ರೇಮಗೀತೆಗಳಲ್ಲೂ ಕಾಣುತ್ತೇವೆ. ಪ್ರೀತಿಯ ಉತ್ಕಟತೆಯಂತೆಯೇ ಅಗಲಿಕೆ, ವಿರಹ, ಭಗ್ನತೆ, ಹದಿಹರಯದ ಮೋಹ – ಈ ಭಾವಗಳೂ ಅವರಲ್ಲಿ ಅದರ ಎಲ್ಲ ವರ್ಣ ಸೂಕ್ಷ್ಮಗಳೊಂದಿಗೆ ಕಾಣಿಸಿಕೊಳ್ಳುತ್ತವೆ. ಮನುಷ್ಯ ಸಂಬಂಧಗಳಲ್ಲಿ ಹೆಚ್ಚು ದಟ್ಟವಾಗಿ ಕಾಡುವ ಗಂಡು ಹೆಣ್ಣಿನ–ಸಂಬಂಧದ ಜಟಿಲತೆಗಳನ್ನು ಉಲ್ಲಾಸ ವಿಷಾದಗಳನ್ನು ಲಕ್ಷ್ಮಣ್‌ರಾವ್ ನಮ್ಮ ಮನಸ್ಸನ್ನು ಕಾಡುವ ಹಾಗೆ ರಚಿಸಿ ಹಾಡಿದ್ದಾರೆ. ಲಕ್ಷ್ಮಣ್‌ರಾವ್‌ರವರ ಗೀತ ಸಂಕಲನ ಆಪ್ತ ಸಖನೊಬ್ಬನ ಅಂತರಂಗದ ದನಿಯಂತೆ ನಮ್ಮ ವ್ಯಕ್ತಿತ್ವವನ್ನು ಆವರಿಸಿ ನಿಲ್ಲುತ್ತದೆ.

ಅಧ್ಯಾಯ – ೧

ಅಡಿ ಟಿಪ್ಪಣಿ

೧. ಜೀವಜಲ" ಬಿ.ಆರ್.ಲಕ್ಷ್ಮಣರಾವ್ ಸಪ್ನ ಬುಕ್ ಹೌಸ್, ಬೆಂಗಳೂರು – ೨೦೧೧

## ಅಧ್ಯಾಯ – ೨

### ಲಕ್ಷ್ಮಣರಾವ್‌ರವರ ಕಾವ್ಯದ ವಸ್ತುಗಳು

ಲಕ್ಷ್ಮಣ್‌ರಾವ್‌ರವರ ಕಾವ್ಯಗಳು ಸಾಮಾನ್ಯವಾಗಿ ಅವರ ಅನುಭಕ್ಕೆ ಬರುವ ಯಾವುದಾದರೊಂದು ಘಟನೆಗಳ ಸನ್ನಿವೇಶಗಳ ಸುತ್ತ ಹೆಣೆದ ಕವಿತೆಯಾಗಿವೆ. ವ್ಯಕ್ತಿಯನ್ನು ಚಿಂತನೆಗೊಳಪಡಿಸುವ ಸಾಮರ್ಥ್ಯವನ್ನು ಹೊಂದಿವೆ. ಅಂತಹ ಅದ್ಭುತ ಬರಣಿಗೆಯ ಶಕ್ತಿ ಬಿ.ಆರ್.ಎಲ್‌ರವರ ಕವಿತೆಗಳ ವಸ್ತುಗಳಲ್ಲಿವೆ.

ಈ ಆಧುನಿಕ ಯುಗದಲ್ಲೂ, ಅದರಲ್ಲೂ ತಂತ್ರಜ್ಞಾನ ಕ್ಷೇತ್ರದಲ್ಲಿ ಟಿ.ವಿ. ಸಾಮಾಜಿಕ ಜಾಲ-ತಾಣಗಳು, ಮೊಬೈಲ್, ಸಿನಿಮಾಗಳ ಅಬ್ಬರದ ನಡುವೆಯೂ ಸಾಹಿತ್ಯವು ಸಾಹಿತ್ಯಾಸಕ್ತರನ್ನು ತನ್ನತ್ತ ಸೆಳೆಯುತ್ತಿರುವುದಕ್ಕೆ ಬಹು ಮುಖ್ಯ ಕಾರಣ ನಮ್ಮ ಸಾಹಿತಿಗಳ ಬರವಣಿಗೆಯ ಶೈಲಿ ಹಾಗೂ ಅದರ ವಿಷಯಗಳು.

ಭಾರತ ದೇಶದ ಅಂಗೀಕೃತ ಭಾಷೆಗಳಲ್ಲಿ ಎಂಟು ಜ್ಞಾನಪೀಠ ಪ್ರಶಸ್ತಿಗಳನ್ನೊಳಗೊಂಡ ಏಕೈಕ ಭಾಷೆ ನಮ್ಮ ಕನ್ನಡ ಭಾಷೆ. ಈ ಸಾಧನೆ ನಮ್ಮ ಸಾಹಿತಿಗಳ ಫಲ. ಈ ರೀತಿಯ ಸಾಧನೆಯನ್ನು ಹೊಂದಿರುವ ನಮ್ಮ ಕನ್ನಡ ಸಾಹಿತ್ಯ ಕ್ಷೇತ್ರವು ಎಷ್ಟರಮಟ್ಟಿನ ಸಾಹಿತ್ಯಾಭಿಮಾನಿಗಳನ್ನು ಹೊಂದಿದೆ ಎಂಬುದನ್ನು ತಿಳಿಯಬಹುದು ಈ ಸಾಧನೆಗಳಿಗೆ ನಮ್ಮವರ ಕೊಡುಗೆ ಅಪಾರ. ಅಂತೆಯೇ ಬಿ.ಆರ್.ಎಲ್‌ರವರು ಹಲವಾರು ಪ್ರಶಸ್ತಿಗಳನ್ನು ತಮ್ಮ ತೆಕ್ಕೆಗೆ ಹಾಕಿಕೊಂಡಿದ್ದಾರೆ.

ಲಕ್ಷ್ಮಣ್‌ರಾವ್‌ರವರ ಕಾವ್ಯವು ಮಧ್ಯಮ ವರ್ಗದ ಯುವಕನ ಬಂಧನ-ಉಲ್ಲಂಘನೆಗಳ ಕಥೆ, ಪ್ರೀತಿ, ಪ್ರೇಮ ಪ್ರಣಯ ರೋಮಾಂಚನ, ತಲ್ಲಣ, ದಾಂಪತ್ಯ, - ಇವೆಲ್ಲವೂ ಇವರ ಕವನಗಳಲ್ಲಿ ಹರಹಿಕೊಂಡಿವೆ. ಅನುಕ್ರಮದಲ್ಲಿ ನೋಡಿದಾಗ ಅವರ ಕವಿತೆ ಹಿಡಿದ ಹೆದ್ದಾರಿ, ಕಿರುದಾರಿಗಳ ಚಹರೆಯೂ ಇಲ್ಲಿ ಗೊತ್ತಾಗುತ್ತದೆ.

ಹಾಡು ಮತ್ತು ಕವಿತೆಗಳ ನಡುವೆ ಇರುವ ಸಂಬಂಧದ ಬಗೆಯೂ ಇಲ್ಲಿ ಒಳನೋಟಗಳಿವೆ. ಒಂದು ಕವಿತೆ ಹಾಡಾಗುವಾಗ ಪಡೆಯುವ ರೂಪಾಂತರಗಳನ್ನು ಇಲ್ಲಿ ಕಂಡುಕೊಳ್ಳಬಹುದು. ಈ ಕವಿಗೆ ಎರಡೂ ಪ್ರಿಯವೇ.

---

೫) "ಕವಿ(ತೆ)ಯ ಕತೆ" ಬಿ.ಆರ್. ಲಕ್ಷ್ಮಣರಾವ್, ಸಪ್ನ ಬುಕ್ ಹೌಸ್, ಬೆಂಗಳೂರು -೨೦೧೩

ಅಪ್ಪನ ಸಂಪ್ರದಾಯದ ಜಗತ್ತು. ಅಮ್ಮನ ಭಾವ ಜಗತ್ತು ಹಾಗೂ ಶಕೂಳ ಪ್ರೇಮ ಜಗತ್ತು ಇವುಗಳ ನಡುವೆ ತನ್ನ ಅಸ್ತಿತ್ವವನ್ನು ಗುರ್ತಿಸಿಕೊಳ್ಳುವ ತನ್ನನ್ನು ತಾನು ಕಂಡುಕೊಳ್ಳುವ ಪ್ರಯತ್ನವೇ ಲಕ್ಷ್ಮಣರಾವ್‌ರವರ ಆರಂಭದ ಕವಿತೆಗಳ ವಸ್ತು. ಇದು ಪ್ರಧಾನವಾಗಿ ಯೌವನದ ಜಗತ್ತು. ಅದಕ್ಕೆ ತಕ್ಕಂತೆ ಅದಮ್ಯ ಬಯಕೆ, ಉತ್ಸಾಹ, ಉನ್ಮಾದ ಲವಲವಿಕೆ ಇಲ್ಲಿ ಅಭಿವ್ಯಕ್ತಿ ಪಡೆಯುತ್ತಾ ಹೋಗುತ್ತದೆ. ಫೋಟೋಗ್ರಾಫರ್, ಗೋಪಿ ಮತ್ತು ಗಾಂಡಲೀನ, ಸಖೀಗೀತ ಮೊದಲಾದ ಕವಿತೆಗಳನ್ನು ನಾವು ಈ ಹಿನ್ನೆಲೆಯಲ್ಲಿ ಗಮನಿಸಬೇಕು. 'ಸಖೀಗೀತ' ತನ್ನ ಶೀರ್ಷಿಕೆಯಿಂದಲೇ ಬೇಂದ್ರೆಯವರ ಪ್ರೇಮಜಗತ್ತನ್ನು ನೆನಪಿಗೆ ತರುತ್ತದೆ.

ಲಂಕೇಶ್‌ರವರು ಸಮರ್ಪಕವಾಗಿ ಗುರುತಿಸಿದ್ದೆಂದರೆ ಲಕ್ಷ್ಮಣರಾವ್‌ರವರ ಪದ್ಯದಲ್ಲಿ ನೋಡಿದ್ದು ವಿಚಿತ್ರ ರೀತಿಯ ಲವಲವಿಕೆ, ನಿಜವಾದ ಕವಿಯಲ್ಲಿ ಇರುವ ಲವಲವಿಕೆ.

ಲಕ್ಷ್ಮಣರಾವ್ ಪದ್ಯಗಗಳಲ್ಲಿನ ಮುಗ್ಧತೆ snobbish ಆಗದ ನಿಲುವು ಲವಲವಿಕೆ, ವಿನೋದ ಪ್ರಜ್ಞೆ ಕಾವ್ಯರೂಪಿಸಿರುವ ದ್ರವ್ಯಗಳು.

ಪರಂಪರೆಯ ವಿಕೃತ ರೂಪವೇ ಆಧುನಿಕತೆಯ ಮುಖವಾಡ ಹಾಕಿಕೊಂಡು ಬರುತ್ತದೆಯೇ ಎಂಬ ಅನುಮಾನ ಆತಂಕ ಇವರಿಗಿದೆ. ಪರಂಪರೆಯ ಬಗ್ಗೆ ಶ್ರದ್ಧೆಯಿಲ್ಲದ, ಆಧುನಿಕತೆಯ ಆವಿಷ್ಕಾರ ಸಾಧ್ಯವಾಗದ ಅತಂತ್ರ ಸ್ಥಿತಿಯ ಜನಾಂಗವೊಂದರ ಪ್ರತಿನಿಧಿಯಂತೆ ಲಕ್ಷ್ಮಣರಾವ್ ಕಾವ್ಯವಿದೆ. ಈ ಸಂಧಿಗ್ಧತೆಯೇ ಲಕ್ಷ್ಮಣರಾವ್ ಕಾವ್ಯದ ವಸ್ತು ಲಯವನ್ನು ರೂಪಿಸಿದೆ.

ನವೋದಯಕ್ಕೆ ಪರಂಪರೆಯ ಬಗ್ಗೆ ಗೌರವವಿತ್ತು. ನವ್ಯಕ್ಕೆ ಪ್ರತಿಭಟಿಸಲು ಪರಂಪರೆಯಿತ್ತು ಲಕ್ಷ್ಮಣರಾವ್‌ಗೆ ಈ ಎರಡೂ ನೆಲೆಗಳಿಲ್ಲ. ಹೀಗಾಗಿಯೇ ಈ ಸಂಧಿಗ್ಧತೆ, ಗೊಂದಲ ಒಂದು ರೀತಿಯ ಶಾಪಗ್ರಸ್ತ ಬದುಕು. ಇದು ಮುಂದೆ ಇವರ ಕಾವ್ಯದಲ್ಲಿ ಸೋಲಿನ .ಭೀತಿಗೆ ಅಪರಾಧಿ ಮನೋಭಾವಕ್ಕೆ ಕಾರಣವಾಗುತ್ತದೆ.

ಕನ್ನಡ ಕಾವ್ಯ ಮೀಮಾಂಸೆಯ ಚರ್ಚೆಯ ಸಂದರ್ಭದಲ್ಲಿ ಲಕ್ಷ್ಮಣರಾವ್‌ರವರ ಅಭಿವ್ಯಕ್ತಿಯ ಹುಡುಕಾಟದ ಸಮಸ್ಯೆ ಮಹತ್ವ ಒಂದು ಭಾಗವಾಗಬಲ್ಲುದು. ಈ ನೆಲೆಯಲ್ಲಿಯೇ ಅನಂತಮೂರ್ತಿಯವರೇ ಗುರ್ತಿಸುವಂತೆ ಲಕ್ಷ್ಮಣರಾವ್ ಕಾವ್ಯ, ನಾವು ಬಹಿರಂಗವಾಗಿ ಒಪ್ಪಿಕೊಳ್ಳದ ಸತ್ಯಗಳನ್ನು ಹಿತವಾದ ಧಾಟಿಯಲ್ಲಿ ಹೇಳಿಬಿಡಬಲ್ಲದು. ಸಾಮಾಜಿಕವಾಗಿ ನಾವು ಒಪ್ಪಿಕೊಳ್ಳದ ಖಾಸಗಿ ಸತ್ಯಗಳನ್ನು ಗುರ್ತಿಸಲು ನಮಗೆ ಕಲಿಸುವ ಇಂಥ ಪದ್ಯಗಳು ನಿಜಕ್ಕೂ ಚೂಪಾದ ಗುಂಡು ಸೂಜಿಗಳಿದ್ದಂತೆ.

"ಇವು ಚೂಟಿಯೋ ಚುಚ್ಚಿಯೋ ತುಟಾಗಿ ನಕ್ಕೋ ನಮ್ಮ ಸಂಸ್ಕೃತಿಯ ಜಾಡ್ಯಗಳಲ್ಲಿ ಒಂದಾದ ಊದಿಕೊಳ್ಳುವ Egotistical sublime ಗೆ ನಿಧಾನವಾಗುತ್ತವೆ."

ಜಿ.ಆರ್.ಎಲ್. ರವರೇ ಹೇಳುವಂತೆ ಬದುಕಿನಲ್ಲಿ ಏನನ್ನಾದರೂ ಸಾಧಿಸಿದರೆ ಅದಕ್ಕೆ ಮುಖ್ಯ ಕಾರಣವಾಗುವುದು ಘಟನೆಗಳು ಹಾಗೂ ಆ ಸ್ಥಳದಲ್ಲಿ ಆದ ಅನುಭವಗಳು, ಕುರುಹುಗಳು, ಚಿತ್ರಗಳು ಅವುಗಳು ನಮ್ಮ ಮೇಲೆ ಬೀರುವ ಪ್ರಭಾವಗಳು. ಆ ಪ್ರಭಾವ ಪ್ರೇರಣೆಗಳಿಂದ ನಾವು ಆಯ್ದುಕೊಳ್ಳುವ ವಿಚಾರಗಳು, ಸಂಗತಿಗಳು ಆ ಮೂಲಕ ನಡೆಯುವ ದಾರಿ ಹೀಗೆ ಸಾಗುತ್ತಾ ಕೊನೆಗೆ ಮುಟ್ಟುವ ಜಾಗ

ಬಂದಾಗ ತಿರುಗಿ ನೋಡಿದರೆ ನಾವು ಸಾಗಿಬಂದ ದಾರಿಯಲ್ಲಿ ಏನೂ ಉಳಿದಿರದಿದ್ದರೂ ಪಡೆದುಕೊಂಡ ಅನುಭವಗಳು ಮಾಸಳಿಯದೇ ಉಳಿಯುವ ಚಿತ್ರಗಳು ಸ್ಮೃತಿಯಲ್ಲೇ ಉಳಿಯುತ್ತವೆ. ಆ ಸ್ಮೃತಿಯಲ್ಲಿರುವುದನ್ನು ಬರವಣಿಗೆಗೆ ಇಳಿಸಿದಾಗಲೇ ಕಾವ್ಯವಾಗುತ್ತದೆ.

ಚಂದೆಶೇಖರ ಕಂಬಾರರವರು ಲಕ್ಷ್ಮಣರಾವ್ ಬಗ್ಗೆ ಹೇಳುವಾಗ ಲಕ್ಷ್ಮಣ್‌ರಾವ್ ಅತ್ಯುತ್ತಮ ಕವಿಗಳಲ್ಲಿ ಒಬ್ಬರು.... ನಿತ್ಯದ ಬೆಂಗಳೂರಿನ ಭಾಷೆಯಲ್ಲಿಯೇ ಅನಾಹತನಾದವನ್ನು ಮಿಡಿಯುತ್ತ ಕ್ಷಿತಿಜದಾಚೆಗಿನ ಅಜ್ಞಾತವನ್ನು ಭಾಷೆಯಲ್ಲಿ ಕ್ಲಿಕ್ಕಿಸುವವರೆಗೆ ಬೆಳದದ್ದು ಇವರ ದೊಡ್ಡ ಸಾಧನೆ. ಕಂಬಾರರ ತಿಳುವಳಿಕೆಮಟ್ಟಗೆ ತುಂಟತನವನ್ನು ಇವರಷ್ಟು ವ್ಯಾಪಕವಾಗಿ, ಅರ್ಥಪೂರ್ಣವಾಗಿ ಬಳಸಿದವರು ಕನ್ನಡದಲ್ಲಂತೂ ಇಲ್ಲ ಎಂದಿದ್ದಾರೆ.

**'ವಾಸಂತಿ ಪ್ರೇಮ ಗೀಮ.. ಕವನಗಳು'**

ಲಕ್ಷ್ಮಣ್‌ರಾವ್‌ರವರಿಗೆ ಹತ್ತೊಂಬತ್ತು ವರ್ಷ ವಯಸ್ಸು ಟೀನೇಜಿನ ಕೊನೆಯ ಸ್ಟೇಜು. ಅವರ ಮನೆಯ ಎದುರುಗಡೆಯ ಮನೆಗೆ ಒಂದು ಹೊಸ ಬ್ರಾಹ್ಮಣ ಕುಟುಂಬ ಬಾಡಿಗೆಗೆ ಬಂದಿತ್ತು. ಅದರಲ್ಲಿ ಒಬ್ಬ ಚೆಲುವೆಯಾದ ನವ ತರುಣಿಯೂ ಇದ್ದಳು. ದಿನನಿತ್ಯ ಹಲವು ಬಾರಿ ತನ್ನ ಮನೆಯ ಮುಂಬಾಗಿಲಿಗೆ ಬಂದು ನಿಲ್ಲುತ್ತಿದ್ದಳು ಆಗ ಕವಿಗಳು ಓದುವ ಸೋಗಿನಲ್ಲಿ ಅವಳ ಮೇಲೆ ಕಣ್ಣಾಡಿಸುತ್ತಿದ್ದರು. ಇದು ತನ್ನ ತಂದೆಯ ಗಮನಕ್ಕೆ ಬಂದು ಅವರು ಹೀಗೆಂದರು 'ಏನು ಆ ಹುಡುಗಿಯ ಮೇಲೆ ತಮಗೆ ಮನಸ್ಸಾದಂತಿದೆಯಲ್ಲ? ಅವಳ ತಂದೆಯ ಹತ್ರ ಮಾತಾಡಲಾ? ಎಂದರು ಬಿ.ಆರ್.ಎಲ್ ಶಾಂತಚಿತ್ತದಿಂದ 'ಅದೇ ಉದ್ದೇಶ ಇರಬೇಕೂಂತ ನಿಯಮವಿದೆಯಾ? ಇದು ನನ್ನ ಒಂದು ಕಥೆಗೆ ಅಥವಾ ಕವನಕ್ಕೆ ಕಾರಣವಾದರೂ ಆಗಬಹುದಲ್ಲ? ಓಹೋ, ಹಾಗೋ? ಎಂದು ಅವರ ತಂದೆ ಒಂದು ತಿರಸ್ಕಾರದ ನಗೆನಕ್ಕು ಹೊರಟು ಹೋದರಂತೆ.

ತಮ್ಮ ಮಾತನ್ನು ಸಾಬೀತು ಪಡಿಸಲೋ ಎಂಬಂತೆ ಬೆಂಗಳೂರಿಗೆ ಹಿಂತಿರುಗಿದ ಕೂಡಲೇ 'ವಾಸಂತಿ' ಮತ್ತು ಪ್ರೇಮಗೀಮ..' ಎಂಬ ಎರಡು ಕವನಗಳನ್ನು ಬರೆದರು.

'ವಾಸಂತಿ' ಮತ್ತು 'ಪ್ರೇಮಗೀಮ' ಕವನಗಳು ೧೯೭೧ರಲ್ಲಿ ಹೊರಬಂದ ಬಿ.ಆರ್.ಎಲ್.ರವರ ಮೊದಲ ಕವನ ಸಂಕಲನ 'ಗೋಪಿ ಮತ್ತು ಗಾಂಡಲೀನ'ದಲ್ಲಿ ಸೇರಿತು. ಹೀಗೆ ವಾಸಂತಿಯು ಅವರ ಕಾವ್ಯದ ವಸ್ತುವಾದಳು.

ಗೆಳೆಯರಿರಲಿ ಕೊನೆ ತನಕ
ಗೆಳೆಯರಿರಲಿ ಈ ಬಾಳಿನಲಿ
ಗೆಳೆಯರಿರಲಿ ಕೊನೆ ತನಕ;
ಹಗುರ ಹೃದಯ ತಿಳಿ ಮನಸಿರಲಿ
ತೊರೆದು ಎಲ್ಲ ತವಕ.

ಬಿ.ಆರ್.ಎಲ್. ಭಾವಗೀತೆಯೊಂದರ ಪಲ್ಲವಿ ಇದು. ಇವರ ಕಾವ್ಯ ಗುರುಗಳಲ್ಲಿ ಒಬ್ಬರಾದ ಲಂಕೇಶ್‌ರವರು ಹೇಳುತ್ತಿದ್ದ ಹಾಗೆ 'ನನ್ನ ಗೆಳೆಯರ ಬಳಗ ವಿಧಾನ ಪರಿಷತ್ ಇದ್ದ ಹಾಗೆ. ಪ್ರತಿ ಎರಡು ವರ್ಷಕ್ಕೊಮ್ಮೆ ಮೂರನೇ ಒಂದು ಭಾಗದಷ್ಟು ಸದಸ್ಯರು ನಿವೃತ್ತರಾಗುತ್ತಾರೆ ಅದು ಲಂಕೇಶ್ ರೀತಿ.

ಬಿ.ಆರ್.ಎಲ್. ಸ್ವಭಾವತಃ ಸ್ನೇಹಪ್ರಿಯ. ಅವರ ಗೆಳೆಯರ ಬಳಗ ತುಂಬ ದೊಡ್ಡದು. ಅದರಲ್ಲೂ ಅವರೇ ಹೇಳುವಂತೆ ಏಕವಚನದ ಗೆಳೆಯರೇ ಹೆಚ್ಚು. ಈ ಪಾಟಿ ಗೆಳೆಯರು ಏಕೆ ಬೇಕಾದರು ? ಎಂಬ ಪ್ರಶ್ನೆಗೆ ಅವರ ಕಂಡುಕೊಂಡ ಉತ್ತರ:

ಬಾಳ ಬೆಲೂನಿನ ತುಂಬ
ಶೂನ್ಯದ ಜಲಜನಕ ಬುರು ಬುರ ತುಂಬಿ
ನಾ ಗಾಳಿಗೆ ಬಿಟ್ಟಾಗ
ಅದನ್ನು ಈ ಭೂಗೋಳಕ್ಕೇ
ಬಿಗಿದು ಕಟ್ಟುವ ದಾರ;
ನನ್ನ ಗೆಳೆಯರು.

'ಮೈಸೂರು ಮಲ್ಲಿಗೆಯ' ಕವಿ ಕೆ.ಎಸ್.ನರಸಿಂಹಸ್ವಾಮಿಯವರಕವಿತೆಯಂತೆ

ಹೂವಿಲ್ಲದಿರೆ ನಾನು ಭೂಮಿಯಲಿ ಇರಲಾರೆ
ಹೂವಿಂದ ಬಲು ದುಃಖ ಹಗುರವಹುದು.

**ಹೀಗೆಂದರೆ...**

ಬಿ.ಆರ್.ಎಲ್.ರವರು ನಮಗೆ ಹುಟ್ಟಿನಿಂದಲೇ ಸಂಬಂಧಿಕರು ದೊರೆತುಬಿಡುತ್ತಾರೆ. ಅಲ್ಲಿ ಆಯ್ಕೆಯ ಸ್ವಾತಂತ್ರ್ಯವಿಲ್ಲ. ಆದರೆ ಗೆಳೆತನ ಹಾಗಲ್ಲ. ಅವರ ವಯಸ್ಸಿಗೆ ಅಭಿರುಚಿಗೆ, ಸ್ವಭಾವಕ್ಕೆ ಹೊಂದುವಂಥ ಗೆಳೆಯರನ್ನು ನಾವೇ ಆಯ್ದುಕೊಳ್ಳಬಹುದು.

**ಬಿ.ಆರ್.ಎಲ್.ರವರೇ ಹೇಳುವಂತೆ**

ಇಷ್ಟಾಗಿ ದೇವರು ಎಂಬುವವನು ಒಬ್ಬನಿರುವುದೇ ನಿಜವಾದರೆ ನಾನು ಅವನನ್ನು 'ಪ್ರಭು' ಎಂದು ಕರೆದು ಕೈಮುಗಿಯಲಾರೆ. 'ಒಡೆಯ' ಎಂದು ಅಡ್ಡಬಿದ್ದು ನಮಿಸಲಾರೆ. 'ಗೆಳೆಯ' ಎಂದು ಕರೆದು ಕೈ ಕುಲುಕಿಯೇನು, ಅಪ್ಪಿಕೊಂಡೇನು. ನನ್ನ ಗೆಳಯರ ಬಳಗಕ್ಕೆ ಅವನನ್ನೂ ಸೇರಿಸಿಕೊಂಡು, ಮತ್ತದೆ ಅವರ ತಾರಕ ಮಂತ್ರ

ಗೆಳೆಯರಿರಲಿ ಈ ಬಾಳಿನಲಿ
ಗೆಳೆಯರಿರಲಿ ಕೊನೆತನಕ

---

೬) "ಕವಿ(ತೆ)ಯ ಕತೆ" ಬಿ.ಆರ್.ಲಕ್ಷ್ಮಣರಾವ್, ಸಪ್ನಬುಕ್ ಹೌಸ್ ಬೆಂಗಳೂರು – ೨೦೧೩

**ಗಾಂಡಲೀನಳ ಸುತ್ತ... ಪರಿಭ್ರಮಿಸುತ್ತ.....**

ಲಕ್ಷ್ಮಣರಾವ್‌ರವರನ್ನು ತುಂಟು ಕವಿ. ಪೋಲಿ ಕವಿ ಮುಂತಾದ ಬಿರುದುಗಳೊಂದಿಗೆ ಖ್ಯಾತಿ ಮತ್ತು ಜನಪ್ರಿಯತೆಯನ್ನು ತಂದುಕೊಟ್ಟ ಅವರ ಚೊಚ್ಚಲ ಕವನ ಸಂಕಲನ 'ಗೋಪಿ ಮತ್ತು ಗಾಂಡಲೀನ' ಪ್ರಕಟವಾದದ್ದು ೧೯೭೧ರಲ್ಲಿ. ಕವಿಯೇ ಹೇಳುವಂತೆ ಅವರು ಆ ಕವನ ಬರೆದಾಗ 'ಕ್ಯಾಬರೇ ನೋಡೇ ಇರಲಿಲ್ಲ. ಅವರ ಗೆಳೆಯ ಗುರುರಾಜ ಅದನ್ನು ನೋಡಿ ಬಂದು ಮಾಡಿದ ವರ್ಣನೆಯನ್ನು ಆಧರಿಸಿ ಆ ಕವನವನ್ನು ಬರೆದರಂತೆ. ಅದು ಕೇವಲ ಕ್ಯಾಬರೆಯ ವರ್ಣನೆಯಾಗದೆ ನಮ್ಮ ಪೌರ್ವಾತ್ಯ ಸಂಸ್ಕೃತಿಯ ಮೇಲೆ ಪಾಶ್ಚಿಮಾತ್ಯ ನಾಗರಿಕತೆಯ ಆಕ್ರಮಣವನ್ನು ಧ್ವನಿಸುತ್ತಿದ್ದರಿಂದ ಗಂಭೀರ ವಿಮರ್ಶಕರ ಮನ್ನಣೆಯನ್ನೂ ಗಳಿಸಿತು.

ಗೋಪಿ ಮತ್ತು ಗಾಂಡಲೀನ' ಕವನ ಪ್ರಕಟವಾದ ಐದು ವರ್ಷಗಳ ನಂತರ ಬಿ.ಆರ್.ಎಲ್.ರವರಿಗೆ ಗಾಂಡಲೀನಳ ಕ್ಯಾಬರೆಯನ್ನು ಕಣ್ಣಾರೆ ಕಾಣುವ ಸೌಭಾಗ್ಯ ದೊರೆತದ್ದು. ನಿಜಕ್ಕೂ ಆಕೆ ಅದ್ಭುತ ಸೆಕ್ಸಿ ನರ್ತಕಿಯೆಂದು ಅವರಿಗೆ ಮನಸದಟ್ಟಾದುದು. ಅಂದು ಆಕೆಯನ್ನು ಭೇಟಿಯಾಗಿ ಹಾಗೂ ಅವರು ಆಕೆಯ ಬಗ್ಗೆ ಬರೆದ ಕವನ ಅಪಾರ ಜನಪ್ರಿಯತೆ ಗಳಿಸಿದ್ದನ್ನು ತಿಳಿಸಿದರಂತೆ. ಆಕೆ ಆ ಕವನವನ್ನು ಇಂಗ್ಲೀಷಿಗೆ ಅನುವಾದಿಸಿ ಕೊಡುವೆಯ? ಎಂದು ಕೇಳಿದಾಗ ಖಂಡಿತ ಕೊಡುತ್ತೇನೆ ಎಂದು ಮಾತುಕೊಟ್ಟಾಗ ಬಿಗಿದಪ್ಪಿ ಕೆನ್ನೆಗೊಂದು ಹೂ ಮುತ್ತು ಕೊಟ್ಟಳಂತೆ. ಆಗ್ಗೆ ಅವಿವಾಹಿತವಾಗಿದ್ದ ಕವಿ ರೋಮಾಂಚಿತವಾಗಿ 'ಧನ್ಯೋಸ್ಮಿ' ಎಂದುಕೊಂಡರಂತೆ. ಸುಗಮ ಸಂಗೀತ ದಿಗ್ಗಜರಾದ ಸಿ. ಅಶ್ವತ್ಥ್‌ರವರು ಅದಕ್ಕೆ ಸೊಗಸಾದ ಪಾಶ್ಚಾತ್ಯ ಶೈಲಿಯ ರಾಗ ಸಂಯೋಜಿಸಿ ಮೈಸೂರು ಅನಂತಸ್ವಾಮಿಯವರೊಂದಿಗೆ ಕೂಡಿ ಹಾಡಿದ ಯುಗಳ ಗೀತೆ ಹಾಡಿದ್ದು ಬಹುಶಃ ಅದೊಂದೇ ಇದ್ದೀತು. ಜಾಲಿಬಾರಿನಲ್ಲಿ ಕೂತ ಪೋಲಿ ಗೆಳೆಯರು ಎಂದು ಶುರುವಾಗುವ ಹಾಡನ್ನು ಸಾರ್ವಜನಿಕವಾಗಿ ಹಾಡುವುದು ಹೇಗಪ್ಪಾ ಎಂದು ಬಿ.ಆರ್.ಎಲ್.ರವನ್ನು ಕೇಳಿದರಂತೆ ನಂತರದಲ್ಲಿ ಆ ಹಾಡೇ ಬಹುತೇಕ ಸುಗಮ ಸಂಗೀತ ಪ್ರಿಯರ ಮಂಗಳಗೀತೆ. ಕವಿಯೇ ಹೇಳುವಂತೆ ಹೀಗಾಗಿ, ಗಾಂಡಲೀನಳಿಗೆ ನಮೋ ನಮಃ

**ಶಕುಂತಲೋಪಾಖ್ಯಾನ (ಸಖೀಗೀತ) ಕವಿತೆಯ ವಸ್ತು**

೧೯೬೭ : ಬಿ.ಆರ್.ಎಲ್.ರವರು ಚಿಂತಾಮಣಿಯ ಡಿಲಿಜೆನ್ಸ್ ಸಂಯುಕ್ತ ಪ್ರೌಢಶಾಲೆಯಲ್ಲಿ ಉಪಧ್ಯಾಯರಾಗಿದ್ದಾಗ ಅಲ್ಲಿನ ವಿದ್ಯಾರ್ಥಿನಿಯರಲ್ಲಿ ಶಕುಂತಲ ಎಂಬ ನವ ತರುಣಿ ಇದ್ದಳು ಆಕೆ ಬಿ.ಆರ್.ಎಲ್.ರವರಲ್ಲಿ ಅನುರಕ್ತಳಾಗಿದ್ದಳೆಂಬುದು ಅವಳ ಹಾವ ಭಾವ ವಿಲಾಸಗಳಿಂದ ಅವರಿಗೆ ಸ್ಪಷ್ಟವಾಗಿತ್ತು ಅವಳ ಪ್ರೇಮದ ಸುಳಿಗೆ ಸಿಕ್ಕಿಬಿದ್ದು ಅವಳನ್ನೇ ಮದುವೆಯಾಗುವುದೆಂದು ನಿರ್ಧರಿಸಿದ್ದರು.

ಶಕುಂತಲ ಎಸ್ಸೆಸ್ಸೆಲ್ಸಿ ಮುಗಿಸುವ ವೇಳೆಗೆ ಅವಳ ಮದುವೆಗಾಗಿ ಅವಳ ಮನೆಯಲ್ಲಿ ಸಿದ್ಧತೆ ಶುರುವಾಗಿರುವ ಸಂಗತಿ ತಿಳಿದು ಶಕೂ ಕೈ ತಪ್ಪಿ ಹೋಗುವಳೆಂಬ ಭಯದಿಂದ ಅವರ ತಂದೆಗೆ ಪತ್ರದ ಮೂಲಕ ತಿಳಿಪಡಿಸಿದರು. ಪತ್ರ ಓದಿದ ತಂದೆ ಗುಟ್ಟಾಗಿ ಶಕುಂತಲ ಮನೆಗೆ ಹೋಗಿ ಒಳಗೊಳಗೇ ಕೆಲಸ ಮಾಡಿ ಮುಗಿಸಿದ್ದರು.

ಬಿ.ಆರ್.ಎಲ್.ರವರು ಎಷ್ಟೇ ಹೋರಾಡಿದರೂ ಪ್ರಯೋಜನವಾಗದೆ ಕೊನೆಗೂ ಶಕುಂತಲ ಕೈ ತಪ್ಪಿ ಹೋದಳು. ಈ ಪ್ರಕರಣದಲ್ಲಿ ಖಳನಾಯಕನಂತೆ ವರ್ತಿಸಿದ ಅವರ ತಂದೆಯ ಬಗ್ಗೆ ಒಂದು ಕಹಿ ಭಾವನೆ ಅವರ ಮನದಾಳದಲ್ಲಿ ಬಹುಕಾಲ ಉಳಿದುಕೊಂಡಿತು.

ಶಕುಂತಲಳನ್ನು ನೇರವಾಗಿ ಉದ್ದೇಶಿಸಿ ಬರೆದ ಕವಿತೆಗಳು ಬಿ.ಆರ್.ಎಲ್.ರ ಮೊದಲ ಕವನ ಸಂಕಲನ 'ಗೋಪಿ ಗಾಂಡಲೀನ'ದಲ್ಲಿವೆ.

ಮುಂದೆ ೧೯೮೫ರಲ್ಲಿ ಖ್ಯಾತ ಕತೆಗಾರರೂ, ಬಿ.ಆರ್.ಎಲ್.ರ ಪ್ರಿಯ ಮಿತ್ರರೂ ಆದ ಜಿ.ಎಸ್.ಸದಾಶಿವ ಮಯೂರ ಮಾಸ ಪತ್ರಿಕೆಯ ಸಂಪಾದಕರಾಗಿದ್ದಾಗ ಪ್ರೇಮಕತೆಗಳ ವಿಶೇಷಾಂಕಕ್ಕೆಂದು ಇವರಿಂದ ಒಂದು ಕತೆಯನ್ನು ಆಹ್ವಾನಿಸಿದ್ದರಂತೆ. ಆಗ 'ಹೀಗೂ ಆಗುವುದುಂಟು' ಎಂಬ ಕತೆ ಬರೆದು ಕಳಿಸಿದರಂತೆ ಅಲ್ಲಿನ ಪಾತ್ರಗಳು, ಸನ್ನಿವೇಶಗಳು ಕಲ್ಪಿತವಾದರೂ ಹಿನ್ನೆಲೆಗಿರುವುದು ಲಕ್ಷ್ಮಣರಾಯರ ಪ್ರೇಮ ಪ್ರಕರಣವೇ. ಆದರೆ ಕತೆಯಲ್ಲಷ್ಟೇ ಸುಖಾಂತವಾಗಿದೆ. ಸಂಪಾದಕರ ಅಪೇಕ್ಷೆಯಂತೆ.

**ಗಿರಿಜಾ ಕಲ್ಯಾಣ : ದಯವಿಟ್ಟು, ದಾಂಪತ್ಯ, ಪರಿಧಿ ಕವಿತೆಗಳ ವಸ್ತು.**

**<u>ದಯವಿಟ್ಟು ಪದ್ಯದ ಸಾಲುಗಳು</u>**

ಹಕ್ಕಿಗಳೆಲ್ಲ ಮರದಿಂದ ಹಾರಿ ಹೋದವು;
ನಾನು ಪ್ರೇಮಿಸಿದ ಹುಡುಗಿಯರಿಗೆಲ್ಲ
ಮದುವೆಯಾಯಿತು.
ಈಗ ನನಗೂ ಮದುವೆಯಾಗಿದೆ
ಆದ್ದರಿಂದ ಅವರೆಲ್ಲ ಸುಖವಾಗಿರಲಿ.
ಆದರೆ ಬೆಳಕಿನ ಬಹಿರಂಗದಲ್ಲಿ
ನನ್ನೆದುರು.
ಅದರಲ್ಲೂ ನನ್ನ ಧರ್ಮ ಪತ್ನಿಯ ಎದುರು
ಸುಳಿಯದಿದ್ದರೆ,
ಅವಳ ಅಗಾಥಾ ಕ್ರಿಸ್ಟಿ ಗಮನ ಸೆಳೆಯದಿದ್ದರೆ
ಸಾಕು.

ಲಕ್ಷ್ಮಣರಾವ್‌ರವರ 'ಶಕುಂತಲೋಪಾಖ್ಯಾನ' ದುರಂತ ಕಂಡ ಐದು ವರ್ಷಗಳ ನಂತರ ೧೯೭೫ರಲ್ಲಿ ಚಿಂತಾಮಣಿಗೆ ಬಂದ ಖ್ಯಾತ ಕವಿಗಳೂ, ಬಿ.ಆರ್.ಎಲ್.ಗೆ ಹಿರಿಯ ಮಿತ್ರರೂ ಆಗಿದ್ದ ಎಸ್.ಎಸ್.ಲಕ್ಷ್ಮೀನಾರಾಯಣಭಟ್ಟರು ತಂದೆ ರಾಜಾರಾಯರ ವಿನಂತಿಯನ್ನು ಕೇಳಿದ ಎಸ್.ಎಸ್.ಎಲ್.ರವರು ಬಿ.ಆರ್.ಎಲ್.ರವರಿಗೆ ಅಪ್ಪಟ ಕನ್ಯಾರತ್ನವನ್ನು ಹುಡುಕಿದರು. ಶಿವಮೊಗ್ಗದ ಸುಬ್ಬಾಭಟ್ಟರ ಮಗಳಾದ ಗಿರಿಜಳನ್ನು ವಿವಾಹವಾದರು. ಭಟ್ಟರ 'ಪೌರೋಹಿತ್ಯದಲ್ಲಿ 'ಪೋಲಿಕವಿ' ಎಂದು ಖ್ಯಾತನಾಮವಾಗಿದ್ದ ಬಿ.ಆರ್.ಎಲ್.ರವರು ಗೃಹಸ್ಥರಾದರು. ಅವರೇ ಹೇಳುವಂತೆ ಅವರ ಕಾವ್ಯದಲ್ಲಿ,

ಇಂದಿಗೂ ಜೀವನೋಲ್ಲಾಸ, ಲವಲವಿಕೆ, ತಾರುಣ್ಯದ ಕಾವು ಉಳಿದಿದ್ದರೆ, ಅದಕ್ಕೆ ಕಾರಣ ಅವರ ಬಾಳ ಜೊತೆಗಾತಿ ಗಿರಿಜ.

ಬಿ.ಆರ್.ಎಲ್.ರವರ ದಾಂಪತ್ಯ ಹಾದು ಬಂದ ಹಾದಿ ಹಾಗೂ ಅದು ತಲುಪಿರುವ ನೆಲೆಯನ್ನು 'ದಯವಿಟ್ಟು' 'ದಾಂಪತ್ಯ' ಮತ್ತು 'ಪರಿಧಿ' ಕವಿತೆಗಳು ಸೂಚಿಸುತ್ತವೆ.

**ದಾಂಪತ್ಯ**

ಬಾಳ ಗೆಳತಿಯೇ, ತರವೇ
ನನ್ನಲ್ಲಿ ಈ ಕೋಪ?
ಮೊದಲಿನಂತೆ ನಾನಿಲ್ಲ
ಎನ್ನುವ ಆರೋಪ?
ಮನೆಯ ತಲೆ ಬಾಗಿಲಲ್ಲಿ
ಒಣಗಿದ್ದರೆ ತೋರಣ,
ನಾನೊಬ್ಬನೆ ಅಲ್ಲ,
ನೀನೂ ಕಾರಣ.

ಅಕ್ಷಯ ಪಾತ್ರೆಯಲ್ಲಿ
ದಾಂಪತ್ಯದ ನಲಿವು,
ತಂದು ತುಂಬಬೇಕು
ನಾವೇ ಪ್ರತಿ ಸಲವೂ

**ಪರಧಿ**

ಆದರ್ಶ ದಾಂಪತ್ಯವೆಂಬುದೊಂದಿದ್ದರೆ, ನಲ್ಲೆ
ಯಾರುಂಟು ಉದಾಹರಣೆ?
ಈ ಮಂಚದ ಮೇಲಾಡುವ ಜೋಡಿ ನಾಗರ ನಾವು
ಕಾಮರೂಪಿಗಳಲ್ಲವೇನೆ?
ಮಕರಂದದ ಹೂವಿಗೆಷ್ಟು ದುಂಬಿಗಳ ಪಾಳಿ!
ಅದರ ಶೀಲಕ್ಕುಂಟೆ ಧಕ್ಕೆ?
ಲಿಂಗಕ್ಕೆ ಕೊಡಗೂಸೇನು? ಗಂಗೆ, ಗೌರಿ, ಅಕ್ಕನೇನು?
ಅದೇನಿಲುವು, ಅದಮ್ಯ ಬುಗ್ಗೆ.

ಹಾಡು ಹಾದಿಯ ತೋರಿತು.

ಸುಬ್ಬಾಭಟ್ಟರ ಮಗಳೇ, ಇದೆಲ್ಲಾ ನಂದೇ, ತಗೊಳ್ಳೆ ಭಾವಗೀತೆಯ – ವಸ್ತು

ಲಕ್ಷ್ಮಣರಾವ್‌ರವರು ಹುಡುಗನಾಗಿದ್ದಾಗ ನೋಡಿದ ತೆಲುಗು ಸಿನಿಮಾದ (ಮಿಸ್ಸಮ್ಮ ಚಿತ್ರದ) ಅವರಿಗೆ ಪ್ರಿಯವಾದ ಹಾಡೊಂದು ನೆನಪಾಗಿ ಗುನುಗಿಕೊಂಡಾಗ

ಕಾವಾಲಂಟೆ ಇಸ್ತಾಲೇ
ನಾವನ್ನೀ ಇಕ ನೀವೇಲೆ
(ಬೇಕೂಂದ್ರೆ ಕೊಡ್ತೀನಿ ತಗೋ ಪ್ರಿಯೆ
ನನ್ನದೆಲ್ಲವೂ ಇನ್ನು ಮುಂದೆ ನಿನ್ನದಲ್ಲವೇ)

ಆಗ ಥಟ್ಟಂತ ಹೊಳಿಯಿತಂತೆ ಈ ಪಲ್ಲವಿ

ಸುಬ್ಬಾಭಟ್ಟರ ಮಗಳೇ.
ಇದೆಲ್ಲಾ ನಂದೇ ತಗೊಳ್ಳೇ

ರಗಳೆ ಕವಿತೆಯ ಮೊದಲ ಭಾಗ ಕವಿಯ ಹೊರಮುಖ (ಶೋರೂಂ) ಎರಡನೆಯ ಭಾಗ ಒಳಮುಖ (ಗೋಡೋನು) ವಸ್ತುವಿನ ದೃಷ್ಟಿಯಿಂದ ಬೇಂದ್ರೆ ಅವರ 'ನಾನು ಬಡವಿ, ಆತ ಬಡವ' ಹಾಡನ್ನು ನೆನಪಿಸುವಂತಿತ್ತು. ಆದ್ದರಿಂದ ಕೆಲವು ಚರಣಗಳನ್ನು ಆರಿಸಿ, ಅಲ್ಲಲ್ಲಿ ತಿದ್ದಿ 'ಕವಿಖಜಾನೆ' ಎಂಬ ಭಾವಗೀತೆಯಾಗಿ ಸಿದ್ದಪಡಿಸಿದರಂತೆ, ಅದು ಬಿ.ಆರ್.ಎಲ್.ರವರ 'ಪ್ರೇಮ ಸುಳಿವ ಜಾಡು' ಸಂಕಲನದಲ್ಲಿ ಸೇರಿಕೊಂಡಿದೆ.

ನಿಂಬೆಗಿಡ ತುಂಬಾ ಚೆನ್ನಾ – ಕವಿತೆಯ ವಸ್ತು

'ನಿಂಬೆಗಿಡ' ಮೂಲದಲ್ಲಿ ಟ್ರಿನಿ ರೂಪೆಜ್ ಎಂಬ ಗಾಯಕ ಹಾಡಿದ 'ಲೆಮನ್ ಟ್ರೀ' ಎಂಬ ಒಂದು ಜನಪ್ರಿಯ ಇಂಗ್ಲೀಷ್ ಹಾಡು. ಅದನ್ನು ಬಿ.ಆರ್.ಎಲ್.ರವರು ಕನ್ನಡಕ್ಕೆ ರೂಪಾಂತರಿಸಿಕೊಂಡು ದೂರದರ್ಶನದ ಕವಿಗೋಷ್ಠಿಯಲ್ಲಿ ಹಾಡಿದರು.

೧೯೮೫ರಲ್ಲಿ ಹೊರಬಂದ 'ಕೆಂಗುಲಾಬಿ' ಧ್ವನಿಸುರುಳಿಯಲ್ಲಿ ಎಚ್ಚೆಸ್ವಿ, ವ್ಯಾಸರಾವ್, ದೊಡ್ಡರಂಗೇಗೌಡ, ಜಯಸುದರ್ಶನ, ಮತ್ತು ಬಿ.ಆರ್.ಎಲ್. ಬರೆದ ಒಟ್ಟು ಎಂಟು ಹಾಡುಗಳು 'ಕೆಂಗುಲಾಬಿ' ಪ್ರಚಂಡ ಯಶಸ್ಸು ಮತ್ತು ಜನಪ್ರಿಯತೆ ಗಳಿಸಿತು. ಆಗ ಕ್ಯಾಸೆಟ್ ಕವಿಗಳೆಂದು ಇವರಿಗೆ ಹಣೆಪಟ್ಟಿ ಕಟ್ಟಿದರು.

---

೭) "ಸುಬ್ಬಾಭಟ್ಟರ ಮಗಳೇ" ಭಾವಗೀತೆಗಳು, ಬಿ.ಆರ್.ಲಕ್ಷ್ಮಣರಾವ್, ಅಂಕಿತ ಪುಸ್ತಕ, ಬೆಂಗಳೂರು–೨೦೧೫

೧೯೮೭ರಲ್ಲಿ ಬಿ.ಆರ್.ಎಲ್.ರವರ ಎಂಟು ಭಾವಗೀತೆಗಳ 'ಸುಬ್ಬಾಭಟ್ಟರ ಮಗಳೆ' ಎಂಬ ಧ್ವನಿ ಸುರುಳಿಯು ವಿಶಿಷ್ಟ ಸ್ಥಾನ ದೊರಕಿಸಿಕೊಟ್ಟಿತು.

ಸುಬ್ಬಾಭಟ್ಟರ ಮಗಳೇ
ಎದೆಲ್ಲಾ ನಂದೇ ತಗೊಳ್ಳೆ:
ನೀಲಿ ನೈಲೆಕ್ಸಿನ ಮೇಘ ವಿನ್ಯಾಸದ ಆಕಾಶದ ಸೀರೆ.
ದಿಗಂತಗಳೇ ಮೇರೆ;
ಮುಂಜಾವಿನ ಬಂಗಾರದ ಬೆಟ್ಟ ಬೆಳದಿಂಗಳ ಬೆಳ್ಳಿ:
ನನ್ನ ಭಾಗ್ಯಕ್ಕೆ ಎಣೆಯಲ್ಲಿ?

<u>ನಿಂಬೆಗಿಡ</u>

ನಾ ಚಿಕ್ಕವನಾಗಿದ್ದಾಗ ಅಪ್ಪ ಹೇಳುತ್ತಿದ್ದರು:
ಈ ನಿಂಬೆಯ ಗಿಡದಿಂದೊಂದು ಒಳ್ಳೆಯ ಪಾಠವ ಕಲೀ, ಮಗು,
ನೀಪ್ರೇಮದಲ್ಲಿ ಎಂದೂ ನಂಬಿಕೆ ಇಡಬೇಡ, ಮರೀ,
ಆ ಪ್ರೇಮವೂ ಸಹ ನಿಂಬೆಯ ಗಿಡದಂತೆಂಬುದ ನೀ ತಿಳಿ:

**ಬಚ್ಚಲಲ್ಲಿ ಬಾಲಮುರಳಿ, ಸಂತೆಯಲ್ಲಿ ಬೇಂದ್ರೆ**
**'ಗುಂಡಪ್ಪ ವಿಶ್ವನಾಥ್' – ಕವಿತೆಯ ವಸ್ತು**

ವಿಶ್ವನಾಥರ ಆಟದ ಕಲಾತ್ಮಕತೆಯನ್ನು ಪ್ರತಿಮೆಗಳ ಸಂಯೋಜನೆಗಳ ಮೂಲಕವೇ ಮೊದಲ ಭಾಗದಲ್ಲಿ ಕಟ್ಟಿಕೊಡಲಾಗುತ್ತದೆ. ಮೊದಲ ಚರಣ ಕ್ರಿಯವಾದ ಆಕ್ರಮಣದೊಂದಿಗೆ ಈ ಪ್ರತಿಮಾ ನಿರ್ಮಾಣವನ್ನು ಯೋಜಿಸಲಾಗಿದೆ. ಈ ಪ್ರತಿಮೆಗಳಲ್ಲಿ ಕಾಣುವ ಆಟದ, ಏಕಾಗ್ರತೆಯ ಮತ್ತು ಅಂತರ್ಮುಖತೆಯ ನಿಲುವುಗಳು ಒಟ್ಟು ಗ್ರಹಿಕೆಯನ್ನು ಸಂಪದ್ಭರಿತಗೊಳಿಸುತ್ತವೆ.

ಕೇವಲ ಒಂದು ವ್ಯಕ್ತಿ ಚಿತ್ರದಂತೆ ತೊಡಗುವ 'ಗುಂಡಪ್ಪ ವಿಶ್ವನಾಥ' ಕವಿತೆ ತನ್ನ ಹಣವನ್ನು ಮೀರಿ ಬೆಳೆಯುತ್ತದೆ. ಇಲ್ಲಿ ಮಾತು ಕಮ್ಮಿ, ಶಿಲ್ಪ ಬಿಗಿ, ಒಳ ಹೆಣಿಗೆಗಳು ದಟ್ಟ. ಕವಿತೆಯ ನಡೆ ಹೇಳುವ ಸಂಗತಿಯೊಂದಿಗೆ ತದಾತ್ಮ್ಯ ಪಡೆಯುತ್ತದೆ.

<u>ಅಮ್ಮ ನಿನ್ನ ಎದೆಯಾಳದಲ್ಲಿ......</u>

ಲಕ್ಷ್ಮಣರಾವ್ ನೆಚ್ಚಿ ತಾಯಿ ಮತ್ತು ಭೂತಾಯಿ – ಈ ಇಬ್ಬರನ್ನೂ ಒಟ್ಟಿಗೆ ಉದ್ದೇಶಿಸಿ ಬರೆದ ಹಾಡು. ಅಮ್ಮ ಯಾರಿಗೆ ತಾನೇ ಇಷ್ಟವಿಲ್ಲ ಹೇಳಿ? ಹೆಂಗಸರಾಗಲೀ ಗಂಡಸರಾಗಲೀ ಅಮ್ಮ ಅಂದ ಕೂಡಲೇ ಎಲ್ಲರೂ ಸಹಜವಾಗಿ ಭಾವುಕರಾಗುತ್ತಾರೆ. ಹೃದಯದ ತಂತಿ ಮಿಡಿಯುತ್ತೆ ಕವಿಗಂತೂ ಅಮ್ಮನ ಹೃದಯವಂತಿಕೆಗೆ ಒಂದು ರೂಪಕ.

---

೮) "ಕವಿ(ತೆ)ಯ ಕತೆ", ಬಿ.ಆರ್.ಲಕ್ಷ್ಮಣರಾವ್, ಸಪ್ನ ಬುಕ್ ಹೌಸ್, ಬೆಂಗಳೂರು – ೨೦೧೩

ಅಮ್ಮ, ನಿನ್ನ ಎದೆಯಾಳದಲ್ಲಿ
ಗಾಳಕ್ಕೆ ಸಿಕ್ಕ ಮೀನು;
ಮಿಡುಕಾಡುತಿರುವೆ ನಾನು,
ಕಡಿಯಲೊಲ್ಲೆ, ನೀ ಕರುಳಬಳ್ಳಿ,
ಒಲವೂಡುತಿರುವ ತಾಯೆ,
ಬಿಡದ ಬುವಿಯ ಮಾಯೆ.

ಅಮ್ಮ, ಹತಾಶಳಾಗಬೇಡ
ಕಣ್ಣೀರಿಡಬೇಡ ಹೀಗೆ ಸುಮ್ಮನೆ
ಒಂದೇ ಸಮನೆ.

ದಾರುಣ

ಹಠಾತ್ತಾಗಿ
ಬರಸಿಡಿಲಿನಂತೆರಗಿದ
ಪಾರ್ಶ್ವವಾಯುವಿಗೆ
ತುತ್ತಾಗಿ
ಮುರಿದು ನೆಲಕ್ಕುರುಳಿದ
ತೆಂಗಿನ ಮರ
ನಮ್ಮಮ್ಮ

ಸಿದ್ಧಿ, ಭರವಸೆ ಕವಿತೆಯ ವಸ್ತು.

ಬಾಲ್ಯದಲ್ಲಿ ವಶೀಕರಣ ವಿದ್ಯೆಯ ಸಾಧನೆಗಾಗಿ ಮಾಡಿದ ಪ್ರಯತ್ನ ಕಾವ್ಯದ ಉದ್ದೇಶಕ್ಕೆ ಒಡ್ಡಿದ ಪ್ರತಿಮೆಯಂತಿದೆಯಲ್ಲವೇ? ಜೀವನದ ಜಂಜಾಟಗಳಿಂದ ಜರ್ಜರಿತರಾದ ಎಷ್ಟೊಂದು ಜನರಿದ್ದಾರಲ್ಲ ನಮ್ಮ ಸುತ್ತ! ಅವರ ಬಾಳಿನಲ್ಲಿ ಭರವಸೆಯನ್ನು ತುಂಬ, ಅವರ ಬಾಡಿ ಮುದುರಿ ಕರಕಲಾದ ಮನಸ್ಸುಗಳನ್ನು ಮತ್ತೆ ಅರಳಿಸಿ ನಳನಳಿಸುವಂತೆ ಮಗ ಮಗಿಸುವಂತೆ ಮಾಡಲು ಪ್ರಯತ್ನಿಸಬೇಕಾದ್ದು ಕಾವ್ಯದ ನಿಜವಾದ ಉದ್ದೇಶವಾಗುತ್ತದೆ ಹಾಗೂ ಸಂಕಲ್ಪವಾಗುತ್ತದೆ.

ಸಿದ್ಧಿ

ಆ ಹೂ
ಮತ್ತೆ
ದಳಬಿಚ್ಚಿ ನಳನಳಿಸಿ
ನಕ್ಕರೆ –
ನೀ ಕವಿ
ಅದು ಕವಿತೆ.

**ಭರವಸೆ**

ಆಗು, ಗೆಳೆಯ, ಆಗು ನೀನು ಭರವಸೆಯ ಪ್ರವಾದಿ
ಹತಾಶೆಯಲ್ಲೇನಿದೆ? ಬರಿ ಶೂನ್ಯ, ಬರೀ ಬೂದಿ

**ಇವಳು ನದಿಯಲ್ಲ ಕವಿತೆಯ ವಸ್ತು**

ಇವಳು ನದಿಯಲ್ಲ

ಕಣ್ಣೆದುರೆ ಪ್ರತಿಕ್ಷಣ
ಹೊಸ ನೀರು ಹೊಸ ವೇಷ ಹೊಸ ಪಾತ್ರ
ಹೊಸ ತುಳುಕು ಬಳುಕುಗಳ
ಬಿನ್ನಾಣಗಿತ್ತಿ ಇವಳಲ್ಲ,
ಇವಳು ನದಿಯಲ್ಲ.

ಛಂದೋ ಬದ್ಧ ಕವಿತೆಗಳು ಕವಿಗೆ ಪ್ರಿಯವಾಗಲು ಪ್ರಮುಖ ಕಾರಣ ಅವುಗಳ ನಾದ ಮತ್ತು ಗೇಯಗುಣ. ಜಿ.ಆರ್.ಎಲ್.ಕವಿಯಾಗುವುದಕ್ಕೂ ಮುಂಚಿನಿಂದ ಗಾಯಕರಾಗಿದ್ದರು. ಚಿತ್ರಗೀತೆಗಳ ಜೊತೆಗೆ ಭಾವಗೀತೆಗಳನ್ನೂ ಹಾಡುತ್ತಿದ್ದರು. ಜಿ.ಆರ್.ಎಲ್.ರವರಿಗೆ ಚಿಕ್ಕಂದಿನಿಂದಲೂ ಕುವೆಂಪು, ಬೇಂದ್ರೆ, ಅಡಿಗ, ಕೆ.ಎಸ್.ನ, ಕಣವಿ, ಮುಂತಾದವರು ಪರಿಚಿತರಾಗಿದ್ದು ಅವರ ಜನಪ್ರಿಯ ಭಾವಗೀತೆಗಳ ಮೂಲಕವೇ ಎನ್ನುತ್ತಾರೆ.

ಅವರು ಗಂಭೀರ ಕಾವ್ಯಗಳನ್ನು ಓದಿದರು. ಆದ್ದರಿಂದಲೇ ಡಿ.ವಿ.ಜಿ. ಹೇಳಿದ್ದು, 'ಕವನ ನೆನಪಿಗೆ ಸುಲಭ, ಮಂಕುತಿಮ್ಮ' ಎಂದು. ಲಕ್ಷ್ಮಣರಾಯರೇ ಹೇಳುವಂತೆ ನನ್ನ ಇಬ್ಬರು ಜೀವನ ಸಂಗಾತಿಯರು: ನನ್ನ ಮಡದಿ ಗಿರಿಜ ಮತ್ತು ನನ್ನ ಕಾವ್ಯ. ಈ ಇಬ್ಬರನ್ನೂ ಒಟ್ಟಿಗೆ ಉದ್ದೇಶಿಸಿ ಬರೆದ ಕವನ 'ಇವಳು ನದಿಯಲ್ಲ' ಇದು ಅವರ ಜೀವನ ಮೀಮಾಂಸೆ ಮತ್ತು ಕಾವ್ಯ ಮೀಮಾಂಸೆ – ಎರಡನ್ನೂ ಒಟ್ಟಿಗೆ ಹೇಳಲು ಪ್ರಯತ್ನಿಸಿರುವ ರಚನೆ.

ನಿರಾತಂಕದಿಂದ ನಾ ಈಜಾಡಲು
ಮಕ್ಕಳು ಮರಿ ದೋಣಿಯಲ್ಲಿ
ವಿಹಾರ ಮಾಡಲು
ನಮ್ಮ ಹೂ ಹಣ್ಣು ತೋಟಕ್ಕೆ
ನೀರೂಡಲು
ಸದಾ ಸಿದ್ಧ ಸಮೃದ್ಧ ಜೀವಜಲ
ಇವಳೊಂದು ಪುಟ್ಟಕೊಳ

ಅಧ್ಯಾಯ – ೨

ಅಡಿ ಟಿಪ್ಪಣಿ

೧–"ಜೀವ ಜಲ" ಸಮಗ್ರ ಕಾವ್ಯ – ಬಿ. ಆರ್. ಲಕ್ಷ್ಮಣರಾವ್ ಸಪ್ನ ಬುಕ್ ಹೌಸ್,
ಬೆಂಗಳೂರು – ೨೦೧೧

೨–ಕವಿ(ತೆ)ಯ ಕತೆ
ಹಿಂದಿನ ಕಥಾ ಸಮಯಗಳ ಸಂಕಲನ ಬಿ.ಆರ್.ಲಕ್ಷ್ಮಣರಾವ್
ಪ್ರಕಾಶಕರು – ಸಪ್ನ ಬುಕ್ ಹೌಸ್ – ಬೆಂಗಳೂರು – ೨೦೧೩

## ಅಧ್ಯಾಯ – ೩

### ಲಕ್ಷ್ಮಣರಾವ್ ಬರವಣಿಗೆಯಲ್ಲಿನ ಭಾಷಾಭಿವ್ಯಕ್ತಿ

ಭಾಷೆ ಎನ್ನುವಂತಹದ್ದು ಮಾನವನ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಅವನ ದೈನಂದಿನ ಬದುಕಿನಲ್ಲಿ ಭಾಷೆ ಒಂದು ಸಂವಹನ ಮಾಧ್ಯಮ.

ವ್ಯಕ್ತಿಯೊಬ್ಬನು ತನ್ನ ಅನಿಸಿಕೆಗಳನ್ನು, ಅಭಿಪ್ರಾಯಗಳನ್ನು ಭಾಷೆಯ ಮೂಲಕವೇ ಮತ್ತೊಬ್ಬರಿಗೆ ಅಭಿವ್ಯಕ್ತಗೊಳಿಸುತ್ತಾನೆ. ಆ ಭಾಷೆಯ ಮೂಲಕವೇ ತನ್ನ ಸ್ಥಾನ ಗುರ್ತಿಸಿಕೊಳ್ಳುತ್ತಾನೆ. ಅಂದರೆ ವ್ಯಕ್ತಿಯು ಉಪಯೋಗಿಸುವ, ಭಾಷೆ, ಶೈಲಿ ಇವೆಲ್ಲವೂ ಬೇರೊಬ್ಬರ. ಮೇಲೆ ಗಂಭೀರ ರೀತಿಯ ಪರಿಣಾಮವನ್ನುಂಟು ಮಾಡುತ್ತದೆ. ಭಾಷೆಯಿಂದಲೇ ವ್ಯಕ್ತಿಯನ್ನು, ವ್ಯಕ್ತಿತ್ವವನ್ನು ಗುಣಗಳನ್ನು ಅಳೆಯುವ ಸಾಧ್ಯವಿದೆ. ಆದ್ದರಿಂದಲೇ ಭಾಷೆ ವ್ಯಕ್ತಿಯೊಬ್ಬನನ್ನು ಅಳೆಯುವ ಮಾನದಂಡ ಎಂದರೆ ತಪ್ಪಾಗುವುದಿಲ್ಲ.

ಲಕ್ಷ್ಮಣರಾವ್ ತಮ್ಮ ಕಾವ್ಯದ ಸಂವಹನಕ್ಕಾಗಿ ಸಮೂಹ ಮಾಧ್ಯಮಗಳನ್ನು ಬಳಸಿಕೊಳ್ಳಲು ಎಂದೂ ಹಿಂಜರಿದವರಲ್ಲ. ಇವರು ವ್ಯಕ್ತಿಯಾಗಿ, ಕವಿಯಾಗಿ ಬೇರೆ ಬೇರೆಯಲ್ಲ. ಇವರ ಕಾವ್ಯಗಳಲ್ಲಿ ಪ್ರೀತಿ ಸ್ನೇಹ ವಿಷಾದ. ಹಾಸ್ಯ ಮತ್ತು ಖುಷಿ ಸಹಜವಾಗಿ ಇರುವುದರಿಂದಲೇ ಪ್ರೇಮ ಕವಿತೆ, ಹಾಸ್ಯ ಕವಿತೆ, ಹನಿಗವಿತೆ ಇತ್ಯಾದಿಗಳು ಮೂಡಿ ಬಂದಿವೆ.

ಕವಿಯಾದವನು ಉತ್ತಮ ಶಬ್ಧ ಭಂಡಾರವನ್ನು ಹೊಂದಿದ್ದರೆ ಸಾಲದು. ಶಬ್ಧಗಳನ್ನು ಉಪಯೋಗಿಸುವ ಶೈಲಿ ಗೊತ್ತಿರಬೇಕು. ಕಾವ್ಯದ ವಸ್ತುಗಳಿಗೆ ಆಕೃತಿ ಆಕಾರಗಳನ್ನು ನೀಡಲು ಅವನಲ್ಲಿರುವ ಉತ್ತಮ ಶಬ್ಧಗಳನ್ನು ಉಪಯೋಗಿಸಿದಾಗಲೇ ಸಾಹಿತಿ ಮಾಡಿದಂತ ಕಾರ್ಯ ಬಹು ಬೇಗ ಸಹೃದಯನಿಗೆ ತಲುಪುವುದು.

ಸಹೃದಯರನ್ನು ಕೇವಲ ಶಬ್ಧಗಳ ಮೂಲಕ ಆಕರ್ಷಿಸಲು ಸಾಧ್ಯವಿಲ್ಲ. ಅದಕ್ಕೆ ಒಂದು ಕಲೆಗಾರಿಕೆಯ ತಂತ್ರದ ಅವಶ್ಯಕತೆಯಿದೆ. ಅಂತಹ ತಂತ್ರಗಾರಿಕೆಯ "ಅಭಿವ್ಯಕ್ತಿ" ಮಾಧ್ಯಮ. ಅದು ಲಕ್ಷ್ಮಣರಾವ್‌ರವರ ಕವಿತೆಗಳಲ್ಲಿ ಸಮರ್ಥವಾಗಿ ಅಭಿವ್ಯಕ್ತವಾಗಿದೆ. ಎನ್ನಬಹುದು.

ಲಕ್ಷ್ಮಣರಾವ್‌ರವರಲ್ಲಿ ಸೂಕ್ಷ್ಮ ವ್ಯಂಗ್ಯವಿದೆ. ತೆಳು ಹಾಸ್ಯದ ಲೇವಡಿಯಿದೆ. ಅವರ ಪ್ರೇಮಗೀತೆಗಳಲ್ಲಿ ಉತ್ಕಟತೆಯಂತೇ ಅಗಲಿಕೆ, ವಿರಹ ಭಗ್ನತೆ ಹದಿಹರಯದ ಮೋಹ – ಈ ಭಾವಗಳೂ ಅವರಲ್ಲಿ ಅದರ ಎಲ್ಲ ವರ್ಣ ಸೂಕ್ಷ್ಮಗಳೊಂದಿಗೆ ಕಾಣಿಸಿಕೊಳ್ಳುತ್ತದೆ.

ಇವರ ಕಾವ್ಯದ ಭಾಷೆ ಮನುಷ್ಯ ಸಂಬಂಧಗಳಲ್ಲಿ ಹೆಚ್ಚು ದಟ್ಟವಾಗಿ ಕಾಡುವ ಗಂಡು ಹೆಣ್ಣಿನ ಸಂಬಂಧದ ಜಟಿಲತೆಗಳನ್ನು ಉಲ್ಲಾಸ ವಿಷಾದಗಳನ್ನು ಲಕ್ಷ್ಮಣರಾವ್ ನಮ್ಮೆಲ್ಲರ ಮನಸ್ಸನ್ನು ಕಾಡುವ ಹಾಗೆ ರಚಿಸಿದ್ದಾರೆ.

---

೯) "ಜೀವಜಲ" – ಸಮಗ್ರಕಾವ್ಯ, ಬಿ.ಆರ್.ಲಕ್ಷ್ಮಣರಾವ್ ಸಪ್ನ ಬುಕ್ ಹೌಸ್, ಬೆಂಗಳೂರು ೨೦೧೧

ಬಿ.ಆರ್.ಎಲ್.ರವರು ಸುಮಾರು ೩೫ ವರ್ಷಗಳಷ್ಟು ಕಾಲ ಸತತವಾಗಿ ಕಾವ್ಯ ರಚನೆ ಮಾಡುತ್ತ ಬಂದಿದ್ದಾರೆ. ಬಿ.ಆರ್.ಎಲ್.ರವರೇ ಹೇಳುವಂತೆ ಇವರು ವಿಮರ್ಶಕರ ನಿರೀಕ್ಷೆಯ ಮಟ್ಟದ ಬೆಳವಣಿಗೆ ಸಾಧಿಸಲು ಸಾಧ್ಯವಾಗದೆ ಹೋಗಿರಬಹುದು. ಆದರೆ ಅವರ ನಿರ್ಲಕ್ಷ್ಯಕ್ಕಂತೂ ಪಾತ್ರನಾಗಿಲ್ಲ ಎಂದಿದ್ದಾರೆ.

ಕನ್ನಡ ಕಾವ್ಯ ನವೋದಯ, ನವ್ಯ ಮತ್ತು ಬಂಡಾಯ ಮಾರ್ಗಗಳಲ್ಲಿ ಹಾದು ಇಂದು ಆ ಎಲ್ಲ ಮಾರ್ಗಗಳ ಗುಣಾತ್ಮಕ ಅಂಶಗಳನ್ನು ಒಳಗೊಂಡಿದ್ದು, ಋಣಾತ್ಮಕ ಅಂಶಗಳನ್ನು ನಿವಾರಿಸಿಕೊಂಡು ಒಂದು ಹೊಸ ಸಮನ್ವಯ ಮಾರ್ಗದ ಆವಿಷ್ಕಾರದಲ್ಲಿ ತೊಡಗಿರುವಂತೆ ತೋರುತ್ತದೆ.

ನವೋದಯದ ಹೃದಯವಂತಿಕೆ ಮತ್ತು ಭಾವಗೀತಾತ್ಮಕತೆ, ನವ್ಯದ ವಿಚಾರವಂತಿಕೆ ಮತ್ತು ಧ್ವನಿ ಸೂಕ್ಷ್ಮತೆ ಬಂಡಾಯದ ಸಾಮಾಜಿಕ ಕಳಕಳಿ ಮತ್ತು ಹೊಣೆಗಾರಿಕೆ ಇವುಗಳನ್ನು ಮೈಗೂಡಿಸಿಕೊಳ್ಳಲು ಇಂದಿನ ಕಾವ್ಯ ಯತ್ನಿಸುತ್ತಿದೆ. ಹಾಗೆಯೇ ನವೋದಯದ ಅತಿ ವಾಚ್ಯತೆ ಮತ್ತು ಭಾವತಿರೇಕದಿಂದ ನವ್ಯದ ಅತಿ ಕ್ಲಿಷ್ಟತೆ ಮತ್ತು ಸಿನಿಕತನದಿಂದ ಬಂಡಾಯದ ಆಕ್ರೋಶ ಮತ್ತು ಆರ್ಭಟಗಳಿಂದ ಪಾರಾಗಲೂ ಸಹಾ ಇಂದಿನ ಕಾವ್ಯ ಬಯಸುತ್ತಿದೆ.

ಲಕ್ಷ್ಮಣ್‌ರಾವ್‌ರವರೇ ಹೇಳುವಂತೆ ಅವರ ಕಾವ್ಯದ ಸಂವಹನಕ್ಕಾಗಿ ಸಮೂಹ ಮಾಧ್ಯಮಗಳನ್ನು ಬಳಸಿಕೊಳ್ಳಲು ಎಂದೂ ಹಿಂಜರಿದವರಲ್ಲ. ಅವು ಕಾವ್ಯಸತ್ವವನ್ನು ಭ್ರಷ್ಟಗೊಳಿಸಬಹುದೆಂಬ, ದುರ್ಬಲಗೊಳಿಸಬಹುದೆಂಬ ಭಯ ಅವರಿಗಿರಲಿಲ್ಲ. ಏಕೆಂದರೆ ಅವರು ಸುಳ್ಳಾಗಿ, ಆತ್ಮವಂಚನೆಯಿಂದ ಎಂದೂ ಬರೆದವರಲ್ಲ. ಅವರು ವ್ಯಕ್ತಿಯಾಗಿ ಕವಿಯಾಗಿ ಬೇರೇ ಬೇರೆಯಲ್ಲ. ಅವರೇನೋ ಅವರ ಕಾವ್ಯವೂ ಅದೇ. ಅವರಲ್ಲಿ ಪ್ರೀತಿ ಸ್ನೇಹ, ವಿಷಾದ ಹಾಸ್ಯ ಮತ್ತು ಖುಷಿ ಸಹಜವಾಗಿ ಇರುವುದರಿಂದಲೇ ಅವರಿಂದ ಪ್ರೇಮ ಕವಿತೆ, ಹಾಸ್ಯಕವಿತೆ, ಹನಿಗವಿತೆ ಇತ್ಯಾದಿಗಳು ಮೂಡಿ ಬಂದಿವೆಯೆಂದು ಭಾವಿಸುತ್ತಾರೆ. ಅವರಲ್ಲಿ ಗಂಭೀರ ಕಾಳಜಿಗಳಿದ್ದು ಗಂಭೀರ ಕವಿತೆಗಳನ್ನೂ ಬರೆದಿದ್ದಾರೆ.

ಬಾಳೇಹಣ್ಣು ಜೀರ್ಣಕಾರಿ,  
ಕಿತ್ತಳೆ ಪುಷ್ಟಿದಾಯಕ;  
ಮಾವಿನ ಹಣ್ಣಲ್ಲಿದೆ ಪ್ರೋಟಿನ್,  
ಕಲ್ಲಂಗಡಿ ರಕ್ತವರ್ಧಕ,  
ನೇರಳೆ ಹಣ್ಣಿನಲ್ಲಿದೆ ಅಯೋಡಿನ್  
ಹಲಸಿನ ಹಣ್ಣಿನಲ್ಲಿದೆ ಫೈಬರ್;  
ಪರಂಗಿ ಹಣ್ಣಿನಲ್ಲಿದೆ ಖನಿಜಾಂಶ  
ದ್ರಾಕ್ಷಿಯಲ್ಲಿ ಗ್ಲೂಕೋಸ್  
ಕರಬೂಜದಲ್ಲಿದೆ ಕಾರ್ಬೋಹೈಡ್ರೇಟ್,  
ಸೇಬು ತಿಂದರೆ ನಿರೋಗ;  
ಅದು ಸರಿ, ಕೇವಲ ರುಚಿಗೆಂದೇ  
ಹಣ್ಣು ಸವಿಯುವುದು ಯಾವಾಗ (ರುಚಿ)

ಇತ್ತೀಚಿನ ದಿನಗಳಲ್ಲಿ ಓದು ಒಂದು ತ್ರಾಸದಾಯಕ ಅನುಭವವೆನ್ನಿಸಿರುವುದು ಈ ಕಾರಣಕ್ಕಾಗಿಯೇ. ಒತ್ತಡಕ್ಕೆ ಓದಬೇಕೇ ಹೊರತು ಸ್ವಸಂತೋಷದಿಂದ ಓದಬೇಕೆನ್ನಿಸುವ ಕೃತಿಗಳ ಸಂಖ್ಯೆ ವಿರಳವಾಗುತ್ತಿದೆ. ಎಲ್ಲವೂ ಬುದ್ಧಿ ಪೂರ್ವಕ ರಚನೆಗಳಾಗಿ ಒಂದು ಉದ್ದೇಶವನ್ನಿಟ್ಟುಕೊಂಡು ಅದನ್ನು ಪೂರೈಸಲು ರಚಿತವಾದವು ಎನ್ನಿಸುತ್ತದೆಯೇ ಹೊರತು ಸಹಜವಾಗಿ ಗಿಡದಿಂದ ಹೂ ಅರಳುವ ಹಾಗೆ ರೂಪುಗೊಂಡವು ಅನ್ನಿಸುವುದಿಲ್ಲ. ಲೇಖಕರು ವಿಚಾರಗಳ, ಸಿದ್ಧಾಂತಗಳ ಭಾರದಲ್ಲಿ ತಿಣುಕುತ್ತಿದ್ದಾರೆ. ಇಂಥ ಹೊತ್ತಿನಲ್ಲಿ ನಮ್ಮ ಅಂತರಂಗದ ಕದ ತಟ್ಟುವ, ಪಿಸುಮಾತಿನ ಸವಿ ನೀಡುವ, ಖಾಸಗಿ ಲೋಕಕ್ಕೆ ಲಗ್ಗೆ ಹಾಕುವ ಮೂಲಕ ನಮ್ಮನ್ನು ಬೆಚ್ಚಿಬೀಳಿಸುವ ಲಕ್ಷ್ಮಣರಾವ್ ಕವಿತೆಯ ಹಣತೆಯನ್ನು ಆರದಂತೆ ಕಾಪಾಡುತ್ತಿರುವ ಸಹಜ ಕವಿಯಾಗಿದ್ದಾರೆ.

ತರುಣ ಜನಾಂಗದ ಈ ನೋವು ಯೌವನದ ಸಹಜ ಸ್ಥಿತಿ ಮಾತ್ರವಲ್ಲ. ಯಾವುದೇ ಬಲವಾದ ವ್ಯವಸ್ಥೆಯ ಬೆಂಬಲವಿಲ್ಲದ, ದಬ್ಬಾಳಿಕೆ ಮಾಡಿ ದಮನಗೊಳಿಸುವ ತಾಕತ್ತಿಲ್ಲದ, ಏಳಲಾರದ, ನಿಲ್ಲಲಾರದ, ಸಮಾಜದಲ್ಲಿ ಪೂರ್ವದವರೂ ಅಲ್ಲದ ಪಶ್ಚಿಮದವರೂ ಅಲ್ಲದ, ಆದರೆ ತಮ್ಮ ಅಸ್ತಿತ್ವ ಖಚಿತಪಡಿಸಿಕೊಳ್ಳದೆ ಗತ್ಯಂತರವಿಲ್ಲ ಎಂಬ ಅರಿವುಳ್ಳ ಒಂದು ಜನಾಂಗದ ನೋವು. ಒಂದು ರೀತಿಯಲ್ಲಿ 'ಕಿಶೋರನ ಆತುರಗೀತೆ' ಲಕ್ಷ್ಮಣರಾವ್ ಕಾವ್ಯ ಇಂಥ ಒಂದು ಜನಾಂಗದ ನೋವನ್ನು ಸಮರ್ಥವಾಗಿ ಪ್ರತಿನಿಧಿಸುತ್ತದೆಂದೇ ಅವರು ಕನ್ನಡ ಕಾವ್ಯದಲ್ಲಿ ಮಹತ್ವ ಸಾಧನೆ ಮಾಡಲು ಸಾಧ್ಯವಾಯಿತೆಂದು ಈ ಅಧ್ಯಯನದಿಂದ ತಿಳಿಯಬಹುದಾಗಿದೆ.

ಅಗೆವಾಗ್ಗೆ ಮೊದಲು ಕೋಶಾವಸ್ಥೆ ಮಣ್ಣು;
ಕೆಳಕ್ಕೆ, ತಳಕ್ಕೆ ಗುದ್ದಲಿಯೆತ್ತಿ, ಕುಕ್ಕಿದರೆ
ಕಂಡೀತು ಗೆರೆಮಿರಿವ ಚಿನ್ನದದಿರು

ಗೋಪಾಲಕೃಷ್ಣ ಅಡಿಗ

ಅಗೆದಾಗ ನಕ್ಕದ್ದು ನುಣುಪು ಕುಂಕುಮ ಭೂಮಿ
ಗುದ್ದಲಿಯ ಕೆಲಸ ಅಲ್ಲಿಗೆ ನಿಂತಿದೆ

ಪಂಚಾಂಗದಂತೆ ಮಳೆಯೂ ಬಿತ್ತು ಹತ್ತುಹನಿ ಜಿವರಿಳಿದು ಬೊಗಸೆ ಹಾಗೂ ತುಂಬಿದೆ

ಕೆ.ಎಸ್.ನರಸಿಂಹಸ್ವಾಮಿ

---

೧೦) 'ಜೀವಜಲ' ಸಮಗ್ರ ಕಾವ್ಯ ಬಿ.ಆರ್.ಲಕ್ಷ್ಮಣರಾವ್, ಮುನ್ನುಡಿ – ನರಹಳ್ಳಿ ಬಾಲಸುಬ್ರಹ್ಮಣ್ಯ

ಲಕ್ಷ್ಮಣರಾವ್ ಒಂದು ನೆಲೆಯಲ್ಲಿ ಅಡಿಗರನ್ನು ಮುಖಾಮುಖಿಯಾದರೆ, ಮತ್ತೊಂದು ನೆಲೆಯಲ್ಲಿ ಕೆ.ಎಸ್.ನರಸಿಂಹಸ್ವಾಮಿಯವರನ್ನು ಮುಖಾಮುಖಿಯಾಗುತ್ತಾರೆ. ಅಡಿಗ ಮತ್ತು ಕೆಎಸ್‌ನ ಕನ್ನಡ ಕಾವ್ಯದ ಎರಡು ಭಿನ್ನ ಸಾಧ್ಯತೆಗಳು ಅಡಿಗರದು. ಆಳಕ್ಕೆ ಅಗೆದು ಚಿನ್ನದದಿರು ತೆಗೆದು ಸೋಸಿ ಇಷ್ಟದೇವತಾ ವಿಗ್ರಹಕ್ಕೊಗ್ಗಿಸುವ ಅಸಲು ಕಸುಬು; ಆದರೆ ನರಸಿಂಹ ಸ್ವಾಮಿಯವರಿಗೆ ಆಳಕ್ಕೆ ಅಗೆಯುವ ಅಗತ್ಯವಿಲ್ಲ. ಅವರದು ಕೃಷಿಕನ ಕೆಲಸ ದಿನನಿಷ್ಠದ ಸಾಮಾನ್ಯ ಸುಖದುಃಖಗಳ ಲೋಕದೊಂದಿಗೆ ಅವರ ಒಡನಾಟ ಅದರಲ್ಲೇ ಅವರಿಗೆ ಸಮಾಧಾನ. ಲಕ್ಷ್ಮಣರಾವ್ ಸಮಸ್ಯೆ ಇವರಿಬ್ಬರಿಗಿಂತ ಭಿನ್ನ. ಲಕ್ಷ್ಮಣರಾವ್ ಅವರಿಗೆ ಆಳವಾದ ಅಗೆತ ಸಾಧ್ಯವಿಲ್ಲ; ಪರಂಪರೆಯ ಜೊತೆ ಈ ಜನಾಂಗಕ್ಕೆ ಆ ಬಗೆಯ ಸಂಬಂಧವಿಲ್ಲ. ಬೇಸಾಯಗಾರನ ಹಾಗೆ ಮಣ್ಣು ಮುಗುಚಿ ಅದರಲ್ಲೇ ಫಸಲು ಪಡೆಯೋಣವೆಂದರೆ ಅಗೆದಾಗ ಸಿಕ್ಕುವುದು, ನರಸಿಂಹ ಸ್ವಾಮಿಯವರಿಗೆ ಸಿಕ್ಕಿದಂತೆ, ನುಣುಪು ಕುಂಕುಮ ಭೂಮಿಯಲ್ಲ, ಕಲ್ಲುಬಂಡೆ, ದಿನನಿತ್ಯದ ಸುಖದುಃಖಗಳನ್ನು ಸಮಾಧಾನದಿಂದ ಸ್ವೀಕರಿಸುವ. ಮನಸ್ಥಿತಿಯೂ ಲಕ್ಷ್ಮಣರಾವ್‌ಗೆ ಸಾಧ್ಯವಿಲ್ಲ.

ಪಟ್ಟನೆ ಬಿರಿದ ದಾಳಿಂಬೆ ಕನಸಲ್ಲಿ
ಮಣಿ ಮಣಿ ಮಿನುಗುತ್ತಿದೆ ಹಸಿ ಕೆಂಪುಗಾಯ
ಗೊನೆ ಕೊನರದ ಚಂದ್ರ
ಬಾಳೆ ಜೋಲುತ್ತಿದೆ;
ಮರ ಮರದ ಗೆಲ್ಲು ಗೆಲ್ಲುಗಳಲ್ಲೂ
ನೂರೆಂಟು ಹಕ್ಕಿ ಹೈಕಳ ಗುಲ್ಲು;
ಹೊರಳುತ್ತಿದೆ ಗಿಡುಗ ನೆರಳು :

ಲಕ್ಷ್ಮಣರಾವ್ ಕಾವ್ಯಕ್ಕೆ ಅಡಿಗರಂತೆ ಮಹತ್ವಾಕಾಂಕ್ಷೆಯೂ ಇಲ್ಲ. ನರಸಿಂಹಸ್ವಾಮಿಯವರಂತೆ ದೈನಿಕಗಳ ನಡುವೆಯೇ ಬದುಕನ್ನು ಸಹನೀಯಗೊಳಿಸಿಕೊಳ್ಳುವ ಸ್ವಭಾವವೂ ಅಲ್ಲ. ಲಕ್ಷ್ಮಣರಾವ್ ಅವರದು ವಿಪ್ಲವ ಜಗತ್ತು ಹೀಗಾಗಿಯೇ ಇವರದು ನವ್ಯಕ್ಕಿಂತ ಭಿನ್ನವಾದ ಹೊಸ ಜನಾಂಗದ ಕಾವ್ಯ.

ಲಕ್ಷ್ಮಣರಾವ್‌ರವರ ಕಾವ್ಯ ಕೌಶಲ್ಯವು ಸಾಮಾನ್ಯ ಓದುಗನೂ ಅರ್ಥೈಸಿಕೊಳ್ಳುವಂತಹ ಭಾಷಾಭಿವ್ಯಕ್ತಿ ಸಾಮರ್ಥ್ಯವನ್ನು ಒಳಗೊಂಡಿದೆ ಎನ್ನಬಹುದು.

ಅಧ್ಯಾಯ – ೩

ಅಡಿ ಟಿಪ್ಪಣಿ

೧. "ಪಡಿ ಮಿಡಿತ" ಬಿ.ಆರ್.ಲಕ್ಷ್ಮಣರಾವ್
ಸಿ.ವಿ.ಜಿ. ಪಬ್ಲಿಕೇಷನ್ಸ್ ಬೆಂಗಳೂರು – ೨೦೧೬
೨. ವ್ಯಕ್ತಿ ಚಿತ್ರಗಳು
ಮಣಿಮಾಲೆ (೨೦೧೩)

## ಅಧ್ಯಾಯ – ೪

### ಲಕ್ಷ್ಮಣ್‌ರಾವ್‌ರವರ ಕಾವ್ಯದಲ್ಲಿ ಸ್ತ್ರೀಸಮಾಜ ಚಿತ್ರಣ

ಬಿ.ಆರ್.ಎಲ್. ತುಂಟ ಕವಿ, ಪೋಲಿ ಕವಿ ಮುಂತಾದ ಬಿರುದುಗಳೊಂದಿಗೆ ಖ್ಯಾತಿ ಮತ್ತು ಜನಪ್ರಿಯತೆಯನ್ನು ತಂದುಕೊಟ್ಟ ಅವರ ಚೊಚ್ಚಲ ಕವನ ಸಂಕಲನ 'ಗೋಪಿ ಮತ್ತು ಗಾಂಡಲೀನ' ಪ್ರಕಟವಾದದ್ದು ೧೯೭೧ರಲ್ಲಿ ಅದರ ಶೀರ್ಷಿಕೆ ಕವನ 'ಗೋಪಿ ಮತ್ತು ಗಾಂಡಲೀನ' ೧೯೬೯ರಲ್ಲಿ 'ಪ್ರಜಾವಾಣಿ'ಯ ಸಾಪ್ತಾಹಿಕ ಪುರವಣಿಯಲ್ಲಿ 'ಗೋಪಿ ಮತ್ತು ಬೆಂಡಲೀನ' ಎಂಬ ಹೆಸರಿನಲ್ಲಿ ಪ್ರಕಟವಾಯಿತು. ಬೆಂಗಳೂರಿನಲ್ಲಿ ಆ ಕಾಲಕ್ಕೆ ತುಂಬ ಜನಪ್ರಿಯವಾಗಿದ್ದ ಕ್ಯಾಬರೆ ಲೈವ್ ಶೋ ಬಗ್ಗೆ ಬಂದ ಮೊದಲ ಕವನ ಎಂದರೆ ತಪ್ಪಾಗುವುದಿಲ್ಲ. ಕೆಂಪೇಗೌಡ ವೃತ್ತದ ಬಳಿ ಇದ್ದ ನೆಪೋಲಿ ಬಾರಿನಲ್ಲಿ ಗಾಂಡಲೀನ ಎಂಬ ಹೆಸರಿನ ನರ್ತಕಿ ಕ್ಯಾಬರೆಗೆ ಪ್ರಸಿದ್ಧಳಾಗಿದ್ದಳು. ಆದ್ದರಿಂದ 'ಪ್ರಜಾವಾಣಿಯ' ಸಂಪಾದಕರು 'ನೆಪೋಲಿ'ಯನ್ನು 'ರಿಪೋಲಿ' ಹಾಗೂ 'ಗಾಂಡಲೀನ'ಗಳನ್ನು ಬೆಂಡಲೀನ ಎಂದು ಬದಲಾಯಿಸಿದರು.

ಬಿ.ಆರ್.ಎಲ್.ರವರು ತಾವೇ ಹೇಳುವಂತೆ ಈ ಕವನ ಬರೆದಾಗ ಕ್ಯಾಬರೆ ನೋಡೇ ಇರಲಿಲ್ಲವಂತೆ. ಅವರ ಗೆಳೆಯನು ಮಾಡಿದ ವರ್ಣನೆಯನ್ನು ಆಧರಿಸಿ ಆ ಕವನವನ್ನು ಬರೆಯಲಾಯಿತು.

ಅದು ಕೇವಲ ಕ್ಯಾಬರೆಯ ವರ್ಣನೆಯಾಗದೆ ನಮ್ಮ ಪೌರ್ವಾತ್ಯ ಸಂಸ್ಕೃತಿಯ ಮೇಲೆ ಪಾಶ್ಚಿಮಾತ್ಯ ನಾಗರೀಕತೆಯ ಆಕ್ರಮಣವನ್ನು ಧ್ವನಿಸುತ್ತಿದ್ದರಿಂದ ಗಂಭೀರ ವಿಮರ್ಶಕರ ಮನ್ನಣೆಯನ್ನೂ ಗಳಿಸಿತು. 'ಅಕ್ಷರ ಹೊಸ ಕಾವ್ಯ'ವೂ ಸೇರಿದಂತೆ ಅನೇಕ ಆಂಥಾಲಜಿ(ಕಾವ್ಯಮಂಜರಿ)ಗಳಲ್ಲಿ ಸ್ಥಾನ ಪಡೆಯಿತು.

ಲಕ್ಷ್ಮಣ್‌ರಾವ್ ಆಧುನಿಕತೆಯನ್ನು ಅರ್ಥೈಸುವ ಪರಿ ಜಾಸ್‌ಗಾನದ ತೊರೆಯ ಮೇಲೆ ಅರೆ ದಿಗಂಬರಿ ಗಾಂಡಲೀನ ತೇಲಿ ಬಂದು ಗೋಪಿಯ ಚೊಂಬು ಕೆನ್ನೆಯನ್ನು ಚುಂಬಿಸಿದಾಗ, ಅವಳ ಮಾನ ನಡುವಿನ ಗಡಿಯನ್ನೂ ಮೀರಿ ಜಾರಿದಂತಾದಾಗ

ಗೋಪಿ, ಕಿಟಾರನೆ ಚೀರಿ,
ಹಾ ವೆಂಕಟಲಕ್ಷ್ಮೀ ಎಂದು
ಧರ್ಮ ಪತ್ನಿಯ ನೆನೆದು, ನೊಂದು,
ನೆಂದು,
ಪರನಾರೀ ಸಹೋದರ,
ಗಾಂಡಲೀನಳ ಪಾದಪದ್ಮಂಗಳಿಗೆ
ಧಡಾರನೆ ಅಡ್ಡ ಬಿದ್ದ.
ನೋ ಅಥವಾ ಜಾರಿಬಿದ್ದನೋ

ಈ ಸಂದಿಗ್ಧತೆಯೇ ಲಕ್ಷ್ಮಣ್‌ರಾವ್‌ರವರ ಕಾವ್ಯದ ವಸ್ತು, ಲಯವನ್ನು ರೂಪಿಸಿದೆ. ಇದು ವಸಾಹತೋತ್ತರ ಭಾರತ ಎದುರಿಸುತ್ತಿರುವ ಗಂಭೀರ ಸಮಸ್ಯೆ ಈ ಹಂತದಲ್ಲಿ ಲಕ್ಷ್ಮಣರಾವ್ ಅಧೀನ ಸಂಸ್ಕೃತಿಯನ್ನು ತಮ್ಮ ಕವಿತೆಯಲಲ್ಲಿ ಸಮರ್ಥವಾಗಿ ವ್ಯಾಖ್ಯಾನಿಸುತ್ತಾರೆ.

ಲಕ್ಷ್ಮಣ್‌ರಾವ್‌ರವರ ಪ್ರಾರಂಭದ ಕಾವ್ಯದಲ್ಲಿ ಗಂಭೀರವಾದ ಒಳಗುದಿಗಳು ಇರಲಿಲ್ಲವೆಂದಲ್ಲ. ಸಾಮಾನ್ಯವಾಗಿ ಲಕ್ಷ್ಮಣ್‌ರಾವ್ ಎಂದರೆ ರಂಜಿಸುವ, ಕಚಗುಳಿಯಿಡುವ, ಹೆಣ್ಣಿನ ಸುತ್ತ ಚಿನ್ನಾಟವಾಡುವ ಮಜಗಾರ ಕವಿ ಎಂಬ ಗ್ರಹಿಕೆ ಬೆಳೆದು ಬಿಟ್ಟಿದೆ. ಖುಷಿಕೊಡುವ ಅವರ ಕಾವ್ಯದ ಆಳದಲ್ಲಿ ವಿಷಾದದ ಎಳೆಗಳು ಇದ್ದೇ ಇದ್ದವು.

ಪ್ರೇಮ-ಗೀಮ- - - ಎಂಬ ಮೊದಲ ಸಂಗ್ರಹದ ಕವಿತೆಯಲ್ಲೇ, ಅವರು ತಮ್ಮ ಹುಡುಗಿಗೆ ಹೇಳುತ್ತಾರೆ.

ಕಣ್ಣಿಂದಲೇ ನನ್ನ ಹೃದಯ ವೃಥಾ ಬೆದಕಬೇಡ.<br>
ನನ್ನ ಹೃದಯ ಸೀಳಿ ನಾನು.<br>
ನಿನಗೆ ತೋರಲಾರೆ<br>
ಏಕೆಂದರೆ,<br>
ಅಲ್ಲಿ ಕೊಳೆತು ನಾರುತ್ತಿದೆ ಒಂದು ಹೆಣ;<br>
ಒಂದೇ ಒಂದು ಹೆಣ;<br>
ಸುತ್ತ ಗುಂಯ್ಗುಡುವ ನೊಣ;<br>
ನನ್ನ ಒಬ್ಬಂಟಿ ಹೆಣ.

ಲಕ್ಷ್ಮಣರಾವ್‌ರವರನ್ನು ತೀವ್ರವಾಗಿ ಕಾಡುವ ಏಕಾಕಿತನ ಮತ್ತು ಸಾವಿನ ಪ್ರಜ್ಞೆ ಅವರ ಹೃದಯದ ಆಳದಲ್ಲೇ ಗಮ್ಮೆನ್ನುತ್ತದೆ. ಅವರ ಬಹಿರ್ಮುಖತೆ, ಅದರೆಲ್ಲಾ ವಿಜೃಂಭಣೆಗೂ ಆಳದಲ್ಲಿ ಏಕಾಕಿಯಾಗಿ ನೋಯುವ ಅವರ ಹೃದಯವನ್ನು ಮುಚ್ಚಿಡಲಿಕ್ಕೆ ಸಾಧ್ಯವಾಗಿಲ್ಲ.

'ನನಗಿಂದು ಆಸ್ತಿಯೂ ಇಲ್ಲ ಆಸ್ತಿ ವಾರವೂ ಇಲ್ಲ' ಎನ್ನುತ್ತಲೇ ಹೊರಡುವ ಈ ಕವಿಯ ಪರಂಪರೆಯ ಸಂಬಂಧ ಕಡಿದುಕೊಂಡಿರುವಿಕೆ, ಒಬ್ಬಂಟತನ, ತನ್ನನ್ನು ಮುಗಿಸಲು ಕಾದಿರುವ ಸಾವಿನ ಪ್ರಜ್ಞೆ ನವ್ಯದ 'ಮಾದರಿ ಮನೋಧರ್ಮ'ವಾದರೂ ಇಷ್ಟೆಲ್ಲದರ ನಡುವೆಯೂ ಬದುಕಬೇಕೆಂಬ ಹಠ, ಬದುಕು ಬದುಕಲಿಕ್ಕಾಗಿ ಇದೆಯೆಂಬ ವಿಶ್ವಾಸ, ಅವರನ್ನು ಮತ್ತೆ ಬದುಕಿನ ಕಡೆ ಸೆಳೆಯುತ್ತದೆ.

ಬಾವಿ ಕಟ್ಟೆಯ ಮೇಲೆ ಕುಳಿತ 'ವಾಸಂತಿ' ಕೂಡ ಕೊನೆಗೆ ನಕ್ಕು ಬಾವಿಯ ಕಟ್ಟೆ ಬಿಟ್ಟು ಕೆಳಗಿಳಿಯುತ್ತಾಳೆ.

'ಸವಿಯಬೇಕಾದ್ದಿನ್ನೂ ಬಹಳವಿದೆ ಗೊತ್ತುಂಟೆ?' ಎಂದು ಗೊಣಗಿಕೊಳ್ಳುವ ಈ ಹುಡುಗಿ ಈ ಕವಿಯ ಮನೋಧರ್ಮದ ಪ್ರತೀಕವೂ ಆಗುತ್ತಾಳೆ.

ಬಾರೇ, ಬಾ, ಶಕುಂತಲೆ, ಶಾಪ ಕಳೆದಿದೆ,<br>
ಮತ್ತೆ ನೆನಪು ಹೊಳೆದಿದೆ, ಬಾ;<br>
ಭರತನನು ಇತ್ತ ತಾ; ಪ್ರೀತಿಯಿಂದ<br>
ಮುತ್ತು ಕೊಡುತ್ತೇನೆ;<br>
ಗಳಗಳ ಅತ್ತು ಬಿಡುತ್ತೇನೆ.<br>
ನಿನ್ನನ್ನು ಬಿಗಿಯಾಗಿ ಅಪ್ಪಿಕೊಳ್ಳುತ್ತೇನೆ;<br>
ಬಾಳನ್ನು ಇಡಿಯಾಗಿ ಒಪ್ಪಿಕೊಳ್ಳುತ್ತೇನೆ.'

ಈ ನಿರ್ಧಾರದ ಭಾವುಕ ಕ್ಷಣದಲ್ಲೂ 'ಗಳಗಳ ಅತ್ತು ಬಿಡುತ್ತೇನೆ' ಎಂದು ಬರೆಯುವ ಮೂಲಕ ತನ್ನ ಒಬ್ಬಂಟಿತನ ಬೋರು ಇತ್ಯಾದಿ ಕೇವಲ ಆರೋಪಿತವಾದುದಲ್ಲ ಎಂಬುದನ್ನು ಸೂಚಿಸುವುದು ಸಾಧ್ಯವಾಗಿರುವುದು ಲಕ್ಷ್ಮಣರಾವ್ ಕಾವ್ಯದ ಗೆಲುವಿನ ಕ್ಷಣಗಳಲ್ಲಿ ಒಂದು.

ಲಕ್ಷ್ಮಣರಾವ್‌ರವರ ಕಾವ್ಯದಲ್ಲಿ ಅಪ್ಪ ಮಗನ ತಿಕ್ಕಾಟ ಹೀಗೆ ಒಂದು ಪ್ರತೀಕಾತ್ಮಕ ಅರ್ಥವನ್ನು ಉದ್ದಕ್ಕೂ ಪಡೆಯುತ್ತಾ ಹೋಗುತ್ತದೆ. ಆಗ ಅಪ್ಪ ಕೇವಲ ಅಪ್ಪನಾಗಿ ಉಳಿಯದೆ ಪರಂಪರೆಯ ಸಂಪ್ರದಾಯದ, ಹೊಣೆಗಾರಿಕೆಯ, ಕೊನೆಗೆ ದೈವದ ಪ್ರತೀಕವೂ ಆಗುತ್ತಾನೆ. ನ್ಯಾಯವಾಗಿಯೇ ಆಗ ತಾಯಿ ಸದ್ಯದ ಬದುಕಿನ, ಮಣ್ಣಿನ, ಐಂದ್ರಿಕ ಜಗತ್ತಿನ ಪ್ರತೀಕವಾಗಿ ಪರಿಣಮಿಸುತ್ತಾಳೆ. 'ಗೋಪಿ ಮತ್ತು ಗಾಂಡಲೀನ'ದ 'ಅಪ್ಪ ಮತ್ತು ಅಮ್ಮ' ಎಂಬ ಕವಿತೆಗಳಲ್ಲಿ ಈ ಪ್ರತೀಕಾತ್ಮಕತೆಯ ಸೂಚನೆಗಳು ಬರುತ್ತವೆ ಎಂಬುದು ಗಮನಿಸಬೇಕಾದ ವಿಷಯ.

'ಗೋಪಿ ಮತ್ತು ಗಾಂಡಲೀನ' ಎಂಬ ಲಕ್ಷ್ಮಣರಾಯರ ಮೊದಲ ಸಂಗ್ರಹದಲ್ಲೇ ಅವರ 'ಫೋಟೋಗ್ರಾಫರ್' ಎಂಬ ಪ್ರಸಿದ್ಧ ಕವಿತೆ ಇದೆಯಷ್ಟೇ? ಈ ಕವಿತೆ ಕಾವ್ಯ ಕರ್ಮದ ಭಂಗಿಗಳನ್ನು ಕಲೆಯಾಗಿ ಹಿಡಿದಿಡುವ ಕವಿಗೆ ಕೊನೆಗೆ ಉಳಿಯುವುದು ನೆಗಟಿವ್‌ಗಳು ಮಾತ್ರ. ಕಲೆಯೆಂಬುದು ಕವಿಯ ವೈಯಕ್ತಿಕ ಚಪಲಗಳ ಪೂರೈಕೆಗೆ ಒದಗಬಾರದಷ್ಟೇ? ಚಪಲಗಳನ್ನು ಮೀರಿದ ನೆಲೆಗೆ ಕವಿ ತಲುಪಿದಾಗ ಮೂಲವಸ್ತು ಪ್ರೀತಿ ವಸ್ತುಗಳೆರಡರ ಹಂಗನ್ನೂ ಹರಿದು ಕವಿ ತನ್ನ ಪಾಡಿಗೆ ತಾನು ತನ್ನ ವೈಯಕ್ತಿಕ ತಾಪತ್ರಯಗಳನ್ನು ಎದುರಿಸಲು ಸಾಧ್ಯವಾಗುವುದು.

ಕವಿಯ ಯಾವ ಕವಿತೆಯೂ ಅರ್ಥದ ತೊಡಕನ್ನು ಹುಟ್ಟಿಸುವುದಿಲ್ಲ. ಆದರೆ ಕವಿಯು ಬಳಸುವ ಪ್ರಾಸದ ಪದಗಳನ್ನು ಮಾತ್ರ ಆಯ್ದು ಓದಿಕೊಂಡರೆ ಕವಿತೆ ಹೇಳುವ ಸ್ಪಷ್ಟ ಅರ್ಥಕ್ಕೂ ತಾನು ಗುಟ್ಟಾಗಿ ಬಯಸುವ ಸಂಕೀರ್ಣತೆಗೂ ಇರುವ ವಿರೋಧ ಕಾಣಿಸುತ್ತದೆ. 'ಅಮ್ಮನಿಗೆ' ಅನ್ನುವ ಕವಿತೆಯಲ್ಲಿ ಅಮ್ಮನಿಗೆ ಸಾಂತ್ವನ ಹೇಳುವಂತಿದ್ದರೂ ಅಲ್ಲಿನ ಪ್ರಾಸ, ಒಳ ಪ್ರಾಸಗಳನ್ನು ಗಮನಿಸಿದರೆ ಕ್ರೌರ್ಯ ಅಸಹನೆಗಳೂ ಇವೆ ಅನ್ನುವ ಅನುಮಾನ ಮೂಡುತ್ತದೆ.

'ಅಮ್ಮ, ನಿನ್ನ ಎದೆಯಾಳದಲ್ಲಿ ಗಾಳಕ್ಕೆ ಸಿಕ್ಕ ಮೀನು' ಕವಿತೆಯ ಸಾಲಿನ ಕವಿಯ ಕವಿತೆಗಳಲ್ಲಿ ಅಮ್ಮನಿಗಿಂತ ಲೋಲೀಟಾಗಳೇ ವಿಜೃಂಭಿಸಿ ರಮಿಸುತ್ತಾರೆ. ಮನೆಯ ಹೆಂಡತಿ ಮತ್ತು ನೆಮ್ಮದಿ ಹಾದರದ ಆಸೆ, ತಿರಸ್ಕೃತನಾಗಿ ಹಾಸ್ಯಾಸ್ಪದನಾಗುವ ಅಳುಕು – ಇವೂ ಇವೆ. ಆದರೆ ಜನ ಫೋಟೋ ನೋಡುತ್ತಾರೆ. ಫೋಟೋ ಗ್ರಾಫರ್‌ನನ್ನು ಅರಿಯುವುದಿಲ್ಲ ಅನ್ನುವುದುಇವರ ಕವಿತೆಗಳ ಒಂದು ಪಲ್ಲವಿಯಾಗಿದೆ

ಖುಷಿಯಿಂದ ಗುನುಗುಟ್ಟುಕೊಳ್ಳಬಹುದಾದ 'ನಾ ಚಿಕ್ಕವನಾಗಿದ್ದಾಗ ಅಪ್ಪ ಹೇಳುತ್ತಿದ್ದರು. ಈ ನಿಂಬೆಯಗಿಡದಿಂದೊಂದು ಒಳ್ಳೇ ಪಾಠವ ಕಲೀ ಮಗು', 'ಸುಬ್ಬಾಭಟ್ಟರ ಮಗಳೇ ಇವೆಲ್ಲ ನಂದೇ ತಗೊಳ್ಳೆ', 'ಬಾರೆ ರಾಜಕುಮಾರಿ ನಾವು ಹೋಗೋಣ ಜಂಬೂ ಸವಾರಿ' ಮುಂತಾದ ಅನೇಕ ಹಾಡುಗಳನ್ನು ಕಟ್ಟಿ ಕನ್ನಡಿಗರ ಕಾವ್ಯ ಸಂವೇದನೆಗೆ ಕಚಗುಳಿಯಿಟ್ಟು ಅದರ ಬಿಗಿಯನ್ನು ಸಡಿಲಿಸಿ ಗೆದ್ದರು. (ಮಧ್ಯಸ್ಥ ಪುಟ–೧೮೯)

'ಇವಳು ನದಿಯಲ್ಲ' ಸಂಕಲನದಲ್ಲಿ ಕೂಡ ತಾತ್ವಿಕತೆ ಮುಂದುವರೆಯುತ್ತದೆ. 'ಇವಳು ನದಿಯಲ್ಲ' ಕವಿತೆಯಲ್ಲಿ ಕವಿ ಕಾಣುವ ನಿರಾಳವನ್ನು ನೋಡೋಣ.

ನಿರಾತಂಕದಿಂದ ನಾ ಈಜಾಡಲು
ಮಕ್ಕಳು ಮರಿ ದೋಣಿಯಲ್ಲಿ
ವಿಹಾರ ಮಾಡಲು,
ನಮ್ಮ ಹೂ ಹಣ್ಣು ತೋಟಕ್ಕೆ
ನೀರೂಡಲು,
ಸದಾ ಸಿದ್ಧ ಸಮೃದ್ಧ ಜೀವಜಲ,
ಇವಳೊಂದು ಪುಟ್ಟಕೊಳ'

ಕಾಣದ ಕಡಲಿನ ಕಡೆಗೆ, ಚೆನ್ನಮಲ್ಲಿಕಾರ್ಜುನನ ಎಡೆಗೆ ತುಡಿವ, ಹಾತೊರೆವ ತೊರೆ ನದಿಯಾಗದೇ ತನ್ನವಳು ಪುಟ್ಟ ಕೊಳವಾಗಿರುವುದಕ್ಕೆ ಕವಿ ಸಂಭ್ರಮ ಪಡುತ್ತಾನೆ.

ಲಕ್ಷ್ಮಣರಾವ್ ಕಾವ್ಯದ ಸೊಗಸು ಇರುವುದು ಅದರ ಜೀವಂತಿಕೆಯಲ್ಲಿ; ಅದರ ಚಿರ ಯೌವ್ವನದಲ್ಲಿ, ಕವಿಗೆ ವಯಸ್ಸಾದರೂ ಅವನ ಕಾವ್ಯಕ್ಕೆ ಮುಪ್ಪು ತಗುಲಬೇಕಿಲ್ಲ. ಇಡೀ ಸಂಕಲನದ ಎಲ್ಲಾ ಕವಿತೆಗಳೂ ಜೀವಂತಿಕೆಯಿಂದ ಮಿಡಿಯುತ್ತಿದ್ದು ಅವು ತಮ್ಮ ವೈಯಕ್ತಿಕ ವಯೋಮಾನವನ್ನು ಬಿಂಬಿಸುತ್ತ ಆಯಾ ವಯೋಮಾನಕ್ಕೆ ತಕ್ಕುದಾದ ಮುಗ್ಧತೆ ಮತ್ತು ತಿಳುವಳಿಕೆಗಳನ್ನು ಬಿಂಬಿಸುತ್ತವೆ. ಅಂತಲೇ ಈ ಕವಿತೆಗಳ ಓದು ನಮ್ಮನ್ನು ಅವುಗಳ ಮುಗ್ಧತೆ ತಿಳುವಳಿಕೆಗಳ ಸ್ನಿಗ್ಧತೆಯಲ್ಲಿ ಅದ್ದುತ್ತವೆ. ನಮ್ಮ ಕಾವ್ಯ ಸಂವೇದನೆಯ ಜೀವಂತಿಕೆಯನ್ನು ವರ್ಧಿಸುತ್ತವೆ.

ಲಕ್ಷ್ಮಣ್‌ರಾವ್‌ರವರ ಸಮಾಜಾಭಿಮುಖತೆ ಸಂವಹನಕ್ಕೆ ಅವಶ್ಯವಾದ ಕೆಲವೊಂದು ಸಂದರ್ಭಗಳಲ್ಲಿ confessional ರೀತಿಯ ಸಮಾಜಾಭಿಮುಖತೆ, 'ಕವಿತೆ'ಯಲ್ಲಿ ಬರುವ ಈ ಸಾಲುಗಳಿದ್ದಂತೆ:

ಎಲ್ಲ ಮಡಿವಂತಿಕೆಗಳನ್ನೂ ಭಯಗಳನ್ನೂ ಮೀರಿ
ಅಥವಾ ಮರೆತು
ಅವಳ ಕಡೆಯೇ ನೋಡುತ್ತ ಕುಳಿತ ನನಗೆ
ಅಂಥ ಚೆಲುವು ತಾನಾಗಿ ಕಣ್ಣ ಮುಂದೆ ಒದಗಿ ಬಂದಾಗ
ನೋಡದೆ
ಬಿಗುಮಾನದಿಂದ ಮುಖ ಹೊರಳಿಸಿ ಕೂಡುವುದು
ಹೀನ ಅಪರಾಧ ಎನಿಸಿತು.

ಜಿ.ಆರ್.ಎಲ್.ರವರ ಮೇಲೆ ಪ್ರಭಾವ ಬೀರಿದ ಗೀತೆ ನಾನು ಬಡವಿ ಆತ ಬಡವ. ಇದರಿಂದ ಜಿ.ಆರ್.ಎಲ್. ಸುಬ್ಬಾಭಟ್ಟರ ಮಗಳೇ ಇದೆಲ್ಲಾ ನಂದೆ ತಗೊಳ್ಳೆ ಎಂಬ ಭಾವಗೀತೆಯ ರಚನೆಗೆ ಕಾರಣವಾಯಿತು. ದಿಮಾಕು ವಿಡಂಬನೆ ಈ ಗೀತೆಯ ಅಂತರಾಳ. ಇವರ ಕವನಗಳು. ನವಿರಾದ ಭಾವನೆಯಿಂದ ಕೂಡಿದ್ದು, ಹೆಣ್ಣು – ಪ್ರೀತಿಯಿಂದ ವಶಪಡಿಸಿಕೊಳ್ಳುವಂತಹದ್ದು. ಎಂಬುದನ್ನು ಅವರ ಕಾವ್ಯಗಳ ಮೂಲಕ ವ್ಯಕ್ತಪಡಿಸಿದ್ದಾರೆ.

ನಮ್ಮ ಅಕೆಡೆಮಿಕ್ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಸಾಹಿತಿ ತನ್ನ ಜನಪ್ರಿಯತೆಯ ಬೆಲೆಯನ್ನು ತೆತ್ತಬೇಕಾದುದು ಅನಿವಾರ್ಯವಾಗಿದೆ.

ಕಾವ್ಯದ ಬಗ್ಗೆ ನಿಜವಾದ ಹಸಿವು ಇಲ್ಲದೆ, ಕಾವ್ಯದ ಬಗ್ಗೆ ಮಾತನಾಡುವುದಾಗಲಿ, ಅದರ ಗುಣದೋಷಗಳನ್ನು ನಿರ್ಣಯಿಸುವುದಾಗಲಿ ಗಂಡಾಂತರಕಾರಿಯಾದ್ದು ಎಂದು ಪೌಲ್ ವಲೆರಿ (Paul Valery) ಬಹಳ ಹಿಂದೆಯೇ ವಿಮರ್ಶಕರನ್ನು ಎಚ್ಚರಿಸಿದ್ದಾನೆ. ಪ್ರಸ್ತುತ ಸಂಗ್ರಹದ 'ಕಾಗದದ ನಕ್ಷತ್ರಗಳು' ಮೂಲ; (Erica Jong) ಎಂಬ ಕವಿತೆಯಲ್ಲಿ ಅಕೆಡೆಮಿಕ್ ವಿಮರ್ಶಕರ ಟೀಕೆ ಇನ್ನೂ ಕಟುವಾಗಿದೆ.

ಆಗ ಬರುತ್ತಾನೆ ವಿಮರ್ಶಕ

\- - - - - - - - -

ತನ್ನ, ಪದವಿ ಪ್ರತಿಷ್ಠೆಗಳೊಂದಿಗೆ
ಒಂದು ಡಬ್ಬಿಯ ತುಂಬ
ಕಾಗದದ ನಕ್ಷತ್ರಗಳೊಂದಿಗೆ
ಒಂದು
ಕಾಗದದ ನಕ್ಷತ್ರವೊಂದನ್ನು ಮೆಚ್ಚುತ್ತಾನೆ.
ಅತ್ಯಂತ ಚೊಕ್ಕ ಕವಿಯೊಬ್ಬನ, ಹಣೆಯ ಮೇಲೆ,
ಏಕೆಂದರೆ ಯಾವ ಬಿರುಗಾಳಿಯೂ
ತಟಸ್ಥ ನಿಲ್ಲುವುದಿಲ್ಲ.
ಹೆಚ್ಚು ಕಾಲ.

ಈ ಕವಿತೆ ಹೆಸರಿಸುವ ಬ್ಲೇಕ್, ವ್ಹಿಟ್‌ಮನ್ ನೆರೂಡರ ಪದ್ಯಗಳಂತೆ ಲಕ್ಷ್ಮಣರಾವ್ ರವರ ಪದ್ಯಗಳು ಕಾವ್ಯ ಸಿದ್ಧಾಂತಗಳ ಬೇರುಗಳನ್ನೇ ಅಲುಗಿಸಬಲ್ಲ 'ಬಿರುಗಾಳಿ'ಗಳೇನಲ್ಲ. ಇಂಥ ಸಮರ್ಥನೆಯ ಮಾತುಗಳನ್ನೂ ಕವಿ ತನ್ನಷ್ಟಕ್ಕೆ ತಾನೇ ಹೇಳಿಕೊಳ್ಳಲಾರ. ಹೀಗಾಗಿ, ಸಾಂಸ್ಕೃತಿಕ ವಿಮರ್ಶೆಯ ಮಾನದಂಡಗಳು ಲಕ್ಷ್ಮಣರಾವ್ ಅವರ ಕಾವ್ಯಕ್ಕೆ ಪ್ರಸ್ತುತವಾಗುವುದಿಲ್ಲ.

ಲಕ್ಷ್ಮಣರಾವ್‌ರವರ ಕಾವ್ಯವನ್ನು ಗಂಭೀರವಾಗಿ ಪರಿಶೀಲಿಸುವ ಅವಶ್ಯಕತೆ ಅಕೆಡೆಮಿಕ್ ವಿಮರ್ಶಕರಿಗೆ ತೋರದೇ ಹೋದುದಕ್ಕೆ ಇನ್ನೊಂದು ಕಾರಣವೆಂದರೆ ಅವರು ಗಳಿಸಿಕೊಂಡ ಜನಪ್ರಿಯತೆ, ಎಲಿಟಿಸ್ಟ್ ವಿಮರ್ಶೆ ಜನಪ್ರಿಯತೆಯನ್ನು ಸಂಶಯದಿಂದಲೇ ನೋಡುತ್ತದೆ. ಇದಕ್ಕೆ ಕಾರಣವೂ ಇಲ್ಲದಿಲ್ಲ ಜನಪ್ರಿಯತೆಯ ರಹಸ್ಯವೇ ಪರಿಚಿತಭಾವ, ಶೈಲಿ, ರಚನೆಗಳ ಪುನರಾವರ್ತನೆಯಲ್ಲಿದೆ. ಆದರೆ ತಮ್ಮ ಹಗುರು ಪದ್ಯಗಳಲ್ಲಿ ಓದುಗರ ಅಪೇಕ್ಷೆಗಳನ್ನು ಪೂರೈಸುವುದಕ್ಕೆಂದು ಒಂದೇ ರೀತಿಯ ಅಭಿವ್ಯಕ್ತಿಯ ಕ್ರಮವನ್ನು ಲಕ್ಷಣರಾವ್ ಅವಲಂಬಿಸುತ್ತಾದರೂ ಅವರ ಮಹತ್ವದ ಕವಿತೆಗಳು ನಿಜವಾದ ಅರ್ಥದಲ್ಲಿ ಪ್ರಯೋಗಶೀಲವಾಗಿವೆ. ಕವಿ ಶೈಲಿಗೆ ತನ್ನನ್ನು ಒಪ್ಪಿಸಿಕೊಳ್ಳುವುದು ಘಾತುಕವಾಗಬಲ್ಲದು ಎನ್ನುವುದರ ಅರಿವೂ ಅವರಿಗಿದೆ. ಆದರೆ ಅವರಲ್ಲಿ ಹಗುರು ಪದ್ಯಗಳೇ ಬರೆಯುವ ಕವಿ ಎಂಬ ಭಾವನೆ ಹಬ್ಬಿಕೊಂಡಿದೆ. ಎಲಿಯಟ್‌ನಂಥ ಕವಿಗಳೂ ಕೂಡ ಪೋಲಿ ಪದ್ಯಗಳನ್ನು ಬರೆದರು. ಆಧರೆ King

Bolo ದಂಥ ಪದ್ಯಗಳನ್ನು ಎಲಿಯಟ್ ಎಚ್ಚರಿಕೆಯಿಂದ ತನ್ನ Canonದ ಹೊರಗಿರಿಸಿದರೆ, ಲಕ್ಷ್ಮಣ್ ಮಾತ್ರ ತಮ್ಮ 'ಶಸಿಯ ಮೊರೆ'ಯಂಥ ಖುಷಿಕೊಡುವ risque ಕಪಿತೆಗಳನ್ನು ಮತ್ತೆ ಪ್ರಕಟಿಸುವ ಸಾಹಸಕ್ಕೆ ಇಳಿಯುತ್ತಿರಲಿಲ್ಲ.

ಆದರೆ ಅವರ ಕಾವ್ಯದ ಮೌಲ್ಯಮಾಪನಕ್ಕೆ ಅಡ್ಡಿ ಬರುವ ಸಿದ್ಧಾಂತಗಳನ್ನು ತಾತ್ಕಾಲಿಕವಾಗಿಯಾದರೂ ಬದಿಗಿಟ್ಟು ಕೇವಲ ಕಾವ್ಯದ ಹಸಿಪಿಗಾಗಿ ಅವುಗಳನ್ನು ಓದುವುದೇ ಒಳ್ಳೆಯ ವಿಧಾನ. ಏಕೆಂದರೆ, ಇಂಥ ಹಸಿವನ್ನು ಹಿಂಗಿಸುವ ಶಕ್ತಿ ಖಂಡಿತವಾಗಿಯೂ ಅವುಗಳಲ್ಲಿದೆ.

ಸ್ವತಃ ಲಕ್ಷ್ಮಣರಾವ್ ಅವರಲ್ಲಿಯೇ ಕಾವ್ಯದ ಹಸಿವು ಎಷ್ಟು ಬಲವಾಗಿದೆಯೆನ್ನುವುದಕ್ಕೆ ಅವರ ಎಲ್ಲ ಸಂಗ್ರಹಗಳಲ್ಲಿಯೂ ಪುರಾವೆ ದೊರೆಯುತ್ತದೆ.

ನಾನು:
ಅವರಿವರ ಸೆಳವಿಗೆ ಸಿಕ್ಕಿ ಬಿದ್ದು,
ದೆಸೆಗೆಟ್ಟು ಭ್ರಮಿಸಿ,
ಹಲವರಿಗೆ ಅಪಶಕುನವೆನಿಸಿ,
ಕೊನೆಗೊಮ್ಮೆ ಸಂಪೂರ್ಣ
ಇಲ್ಲವಾಗುವ
ಒಂದು ಧೂಮಕೇತು

ಎನ್ನುವ ಮಾತು ಲಕ್ಷ್ಮಣರಾವ್ ಅವರ ಕಾವ್ಯ ವ್ಯಕ್ತಿತ್ವಕ್ಕೆ ಅಷ್ಟೊಂದು ಅನ್ವಯಿಸುವುದಿಲ್ಲವಾದರೂ, ಅನೇಕ ಕಪಿಗಳ ಪ್ರಭಾವಕ್ಕೆ ಅವರು ತಮ್ಮನ್ನು ತೆರೆದುಕೊಂಡುದು ಸ್ಪಷ್ಟವಿದೆ. ಇವರಲ್ಲಿ ಬೇಂದ್ರೆ, ಅಡಿಗ ಮತ್ತು ರಾಮಾನುಜನ್ ಮುಖ್ಯರು ರಾಮಾನುಜನ್ ಅನೇಕ ಅಂಶಗಳಲ್ಲಿ ಲಕ್ಷ್ಮಣರಾವ್‌ರವರಿಗೆ ಸಮಾನ ಧರ್ಮೀಯರಾದುದರಿಂದ ಉಳಿದ ಕಪಿಗಳಿಗಿಂತ ಇವರಿಂದ ಈ ಕವಿ ಕಲಿತುದುದು ಹೆಚ್ಚು. ಬೇಂದ್ರೆ ಮತ್ತು ಅಡಿಗರ ಕಾವ್ಯವನ್ನು ಲಕ್ಷ್ಮಣರಾವ್ ಉಪಯೋಗಿಸಿಕೊಳ್ಳುವ ರೀತಿ ಇದಕ್ಕಿಂತ ಭಿನ್ನವಾದದ್ದು ಎಂದು ನಮ್ಮ ಈ ಅಧ್ಯಯನದಿಂದ ತಿಳಿಯಬಹುದಾಗಿದೆ.

ಅಪ್ಪ, ಅಮ್ಮ ಹಾಗೂ ಶಕೂ-ಲಕ್ಷ್ಮಣರಾವ್ ಕಾವ್ಯದಲ್ಲಿನ ಪ್ರಧಾನ ರೂಪಗಳು

ಅಪ್ಪ;
ಅಪ್ಪನಿಗೆ ಹತ್ತಿದೆ
ಸಂಪ್ರದಾಯದ ತೊನ್ನು, ಪ್ರತಿಷ್ಠೆಯ ಕುತ್ತ
ತಲತಲಾಂತರದ ಆಸ್ತಿಯ ಮೇಲಿದೆ
ಅಪ್ಪನ ಸುಭದ್ರಸ್ತಿವಾರ

ಅಮ್ಮ;
ಅಮ್ಮನ ಹೃದಯದಾಳದಲ್ಲಿ
ಗಾಳಕ್ಕೆ ಸಿಕ್ಕ ಮೀನು ನಾನು;
ವೃಥಾ ಗುದ್ದಾಡಿ, ಒದ್ದಾಡಿ ಸುಮ್ಮನಾಗುತ್ತೇನೆ.

ಶಕೂ;
ಅಪ್ಪನ ಹೊನ್ನ ಚೌಕಟ್ಟಿನ
ಕನ್ನಡಕದ
ಕಣ್ಣಿಗೆ, ಕುರೂಪಿಯಾಗಿ ಕಂಡ
ನನ್ನ ಬಡ ಹೆಣ್ಣೇ
ಶಕೂ, ನನಗೆ ನೀನೇ ಬೇಕು.

ಅಪ್ಪನ ಸಂಪ್ರದಾಯದ ಜಗತ್ತು, ಅಮ್ಮನ ಭಾವ ಜಗತ್ತು ಹಾಗೂ ಶಕೂಳ ಪ್ರೇಮ ಜಗತ್ತು ಇವುಗಳ ನಡುವೆ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ತನ್ನನ್ನು ತಾನು ಕುಂಡುಕೊಳ್ಳುವ ಪ್ರಯತ್ನವೇ ಲಕ್ಷ್ಮಣರಾವ್ ಅವರ ಆರಂಭದ ಕವಿತೆಗಳ ವಸ್ತು. ಇದು ಪ್ರಧಾನವಾಗಿ ಯೌವನದ ಜಗತ್ತು. ಅದಕ್ಕೆ ತಕ್ಕಂತೆ ಅದಮ್ಯ ಬಯಕೆ, ಉತ್ಸಾಹ, ಲವಲವಿಕೆ, ಉನ್ಮಾದ ಇಲ್ಲಿ ಅಭಿವ್ಯಕ್ತಿ ಪಡೆಯುತ್ತಾ ಹೋಗುತ್ತದೆ. ಫೋಟೋಗ್ರಾಫರ್, ಗೋಪಿ ಮತ್ತು ಗಾಂಡಲೀನ, ಸಖೀಗೀತ ಮೊದಲಾದ ಕವಿತೆಗಳು ತನ್ನ ಶೀರ್ಷಿಕೆಯಿಂದಲೇ ಬೇಂದ್ರೆಯವರ ಪ್ರೇಮ ಜಗತ್ತನ್ನು ನೆನಪಿಗೆ ತರುತ್ತವೆ.

ಅಂತಃ ಪಟದಾಚೆ ವಿಧಿ ತಂದ ವಧು ನೀನು

ಮೊಲೆಯ ಸಾವರಿಸಿ ನಿಂತಿದ್ದೀಯ

ನಾಟಿಸಿ ಕಣ್ಣೋಟ ಸೋಕಿಸಿ ಕೈ ಬೆರಳು

ಮರವಟ್ಟ ಮನ ಬನ ಚಿಗುರಿಸಿದೆ (ಸಖೀಗೀತ)

ಇದು ಬೇಂದ್ರೆಯವರ ಲೋಕ. ಈ ಲೋಕಕ್ಕೆ ಲಕ್ಷ್ಮಣರಾವ್ ಯೌವನದ ಜಗತ್ತಿಗೂ ಇರುವ ಅಂತರವೇ ಅವರ ಕಾವ್ಯದ ಸ್ವರೂಪವನ್ನು ರೂಪಿಸಿದೆ. ಒಟ್ಟಾರೆ ಪರಂಪರೆಯನ್ನು ಒಪ್ಪಿಕೊಳ್ಳುತ್ತಲೇ ಹೊಸದನ್ನು ಸ್ವೀಕರಿಸುವ, ಒಂದು ರೀತಿಯಲ್ಲಿ ಒಳ ಬಂಡಾಯದ ನೆಲೆ ನವೋದಯದ ಯೌವನದ ಸ್ವರೂಪ. ಲಕ್ಷ್ಮಣರಾವ್ ಯೌವನಕ್ಕೆ ಪರಂಪರೆಯ ಬಗ್ಗೆ ಆ ಬಗೆಯ ಗೌರವವಿಲ್ಲ. ಹಾಗೆಂದು ಅದನ್ನು ಸಂಪೂರ್ಣ ತಿರಸ್ಕರಿಸಿ ನಿಲ್ಲುವ ಶಕ್ತಿಯೂ ಇಲ್ಲ. ಇದು ನವ್ಯದ ಯೌವನಕ್ಕಿಂತಲೂ ಭಿನ್ನವಾದದ್ದು. ಲಂಕೇಶರು ಇದನ್ನು ಸಮರ್ಪಕವಾಗಿ ಗುರುತಿಸಿದ್ದಾರೆ. ನಿನ್ನ ಪದ್ಯದಲ್ಲಿ ನಾನು ನೋಡಿದ್ದು ವಿಚಿತ್ರ ರೀತಿಯ ಲವಲವಿಕೆ, ನಿಜವಾದ ಕವಿಯಲ್ಲಿ ಇರುವ ಲವಲವಿಕೆ. ಹಿಂದೆ ಇರುವ ಪದ್ಯ ಇಲ್ಲಿ ಪದ್ಯ ಬರಬೇಕು. 'ಗೋಪಿ ಮತ್ತು ಗಾಂಡಲೀನ' ಎಂಬ ಕವನದ ವಸ್ತು ಎಂಥವರಿಗೂ ಹೊಳೆಯುವಂಥದು. ಅಷ್ಟೇಕೆ ಕೆಲವರಿಗೆ ಹೊಳೆಯುವುದು ಅದೊಂದೇ ಯಾವಳೋ ಹೆಂಗಸು ಬಟ್ಟೆ ಬಿಚ್ಚಿಕೊಂಡು ಕುಣಿಯುವಾಗ ನೀನು ನಿನ್ನ ಗೆಳೆಯರ ಜೊತೆಗೆ ಬಾಯಿ ಬಿಟ್ಟುಕೊಂಡು ನೋಡುವ ದೃಶ್ಯ ನಗೆ ತರಿಸುತ್ತದೆ. ಆದರೆ ಕವಿ ನೋಡುವ ಮೂಲತಃ ಮುಗ್ಧನಾದ್ದರಿಂದ ಅಲ್ಲಿ ಪಟ್ಟ ಅಚ್ಚರಿ, ತಕ್ಕೊಂಡ ಲಯವೆಲ್ಲ ಅಲ್ಲಿ ಬಂದಿದೆ. ಗೋಪಿಗಾದ ಅನುಭವ, ಪಾಪಪ್ರಜ್ಞೆ, ನೈತಿಕ ನಿಲುವು ದಾಟಿ ಒಂದು ಅಸಂಬದ್ಧ, ನಾಟಕೀಯ ಭಾವನೆ ಕೆರಳಿಸಲು ಕವನ ಶಕ್ತವಾಗಿದೆ. ನಿಸಾರ, ಚೆನ್ನಯ್ಯ, ಅನಂತಮೂರ್ತಿ ಇಂಥವರಲ್ಲಿ ಇಂಥ ಘಟನೆ ಬಂದಿದ್ದರೆ ಒಂದು ರೀತಿಯ ಮುನಿಸು, ಭಯ ಇರುತ್ತಿತ್ತಾಗಿ ಇಲ್ಲಿಯ

ರೀತಿಯ ವಿನೋದಪೂರ್ವ ತೀವ್ರತೆಯಿಂದ ಕವನ ವಂಚಿತವಾಗುತ್ತಿತ್ತು. ಇವರ ಕವನ ಯಾಕೆ ಚೆನ್ನಾಗುತ್ತದೆಂದರೆ ಬಟ್ಟೆ ಬಿಚ್ಚುವ ಫ್ಯಾಷನಬಲ್ ಸ್ಥಳದಲ್ಲೂ ಕವಿ ಸ್ವಭಾವತಃ ಗೋಪಿಗಿಂತಲೂ ದೊಡ್ಡ ಗಾಂಪನಾದ್ದರಿಂದ Snobbish ನಿಲುವು ತೆಗೆದುಕೊಳ್ಳುವುದಿಲ್ಲ.

ಈ ಪದ್ಯದಲ್ಲಿ ನವ್ಯತೆ ಕೇವಲ ನವ್ಯ-pose ಆಗದೆ ತನ್ನತನ ತೋರಿದೆ. ಈ ಮುಗ್ಧತೆ, pose ಆಗದ ನಿಲುವು, ಲವಲವಿಕೆ ವಿನೋದ ಪ್ರಜ್ಞೆ-ಲಕ್ಷ್ಮಣರಾವ್ ಕಾವ್ಯವನ್ನು ರೂಪಿಸಿರುವ ಅವರನ್ನು ಕನ್ನಡ ಕಾವ್ಯ ಜಗತ್ತಿನಲ್ಲಿ ವಿಶಿಷ್ಟರನ್ನಾಗಿಸಿರುವ ದ್ರವ್ಯಗಳು.

ಆ ಕ್ಯಾಬರಿ, ಅರೆ ದಿಗಂಬರಿ,

ಅವನ ಬಳಿಗೇ ಸರಿದು,

ಅವನ ಹೆಂಡೆಹೊಟ್ಟೆಯ ಸುತ್ತುವರಿದು,

ಅವನ ಚೊಂಬು ಕೆನ್ನೆಯ ಮೇಲೆ

ತನ್ನ ತೊಂಡೆ ತುಟಿಗಳನ್ನು ಬಿಂಬಿಸಿದಾಗ,

ಜುಮ್ಮೆನಿಸಿ, ಗೋಪಿ

ಅವಳು ಜಗಿದು ಹೀರುತ್ತಿದ್ದ

ಚ್ಯೂಯಿಂಗ್ ಗಮ್ಮಾದ.

ಆಧುನಿಕ ಜನಾಂಗಕ್ಕೆ ಸೇರಿದ ಲಕ್ಷ್ಮಣರಾವ್ ಆಧುನಿಕತೆಯನ್ನು ತೆರೆದ ಮನಸ್ಸಿನಿಂದ ಸ್ವೀಕರಿಸುವುದಿಲ್ಲ. ಪರಂಪರೆಯ ಜೊತೆ ಕ್ರಿಯಾತ್ಮಕ ಸಂಬಂಧ ಸೃಷ್ಟಿಸಿಕೊಳ್ಳಲಾರದ ಇವರಿಗೆ ಆಧುನಿಕತೆಯೊಂದಿಗೂ ತಮ್ಮನ್ನು ಗುರುತಿಸಿಕೊಳ್ಳಲಾಗುತ್ತಿಲ್ಲ. ಪರಂಪರೆಯ ವಿಕೃತ ರೂಪವೇ ಆಧುನಿಕತೆಯ ಮುಖವಾಡ ಹಾಕಿಕೊಂಡು ಬರುತ್ತಿದೆಯೇ ಎಂಬ ಅನುಮಾನ, ಆಂತಕ ಇವರಿಗಿದೆ. ಪರಂಪರೆಯ ಬಗ್ಗೆ ಶ್ರದ್ಧೆಯಿಲ್ಲದ, ಆಧುನಿಕತೆಯ ಆವಿಷ್ಕಾರ ಸಾಧ್ಯವಾಗದ ಅತಂತ್ರ ಸ್ಥಿತಿಯ ಜನಾಂಗವೊಂದರ ಪ್ರತಿನಿಧಿಯಂತೆ ಲಕ್ಷ್ಮಣರಾವ್ ಕಾವ್ಯವಿದೆ.

ಪಿಟೀಲು ವಾದಕ-ಸೀನ-ಸೀನ ಎಂದು ಕರೆಯುವುದೇ ಅರ್ಥಪೂರ್ಣ. ಶಾಸ್ತ್ರೀಯ ಸಂಗೀತದಲ್ಲಿ ಯಶಸ್ಸು ಕಾಣಲಿಲ್ಲ. ಆದರೆ ಹಟಬಿಡುವ ಸೀನ ತನ್ನ ಅಭ್ಯಾಸ ಬಿಡಲಿಲ್ಲ.

ಅವನ ವಿಲಿಯ ವಿತಾನ ವೇದನಮಯ
ವಾದನೆ,
ನಮ್ಮೂರಿನ ಬಂಗಿಯ ಗುಂಗಿನ ಹಿಪ್ಪಿ ಹೈದರಿಗೆ
ಮಾದಕ, ಮೋದಕ
ಪೈತ್ಯ ಪ್ರಚೋದಕ
ಸಮಾಧಿರುಳಿಯಲು ಸಾಧನ (ಪಿಟೀಲು ಸೀನ)

ಇದು ಲಕ್ಷ್ಮಣರಾವ್ ಆಧುನಿಕತೆಯನ್ನು ಅರ್ಥೈಸುವ ಪರಿ. ಜಾನಗಾನದ ತೊರೆಯ ಮೇಲೆ ಅರೆ ದಿಗಂಬರಿ ಗಾಂಡಲೀನ ಒಂದು ಗೋಪಿಯ ಚೊಂಬು ಕೆನ್ನೆಯನ್ನು ಚುಂಬಿಸಿದಾಗ, ಅವಳ ಮಾನ ನಡುವಿನ ಗಡಿಯನ್ನೂ ಮೀರಿ ಜಾರಿದಂತಾದಾಗ

ಗೋಪಿ ಕಿಟಾರನೆ ಚೀರಿ

ಹಾ ವೆಂಕಟಲಕ್ಷ್ಮೀ: ಎಂದು

ಧರ್ಮ ಪತ್ನಿಯ ನೆನೆದು, ನೊಂದು, ನೆಂದು

ಪರನಾರೀ ಸಹೋದರ,

ಗಾಂಡಲೀನಳ ಪಾದ ಪದ್ಮಂಗಳಿಗೆ

ದಢಾರನೆ ಅಡ್ಡ ಬಿದ್ದ

ನೋ ಅಥವಾ ಜಾರಿಬಿದ್ದನೋ? (ಗೋಪಿ ಮತ್ತು ಗಾಂಡಲೀನ)

ಈ ಸಂದಿಗ್ಧತೆಯೇ ಲಕ್ಷ್ಮಣರಾವ್ ಕಾವ್ಯದ ವಸ್ತು, ಲಯವನ್ನು ರೂಪಿಸಿದೆ. ಇದು ವಸಾಹತೋತ್ತರ ಭಾರತ ಎದುರಿಸುತ್ತಿರುವ ಗಂಭೀರ ಸಮಸ್ಯೆ. ಈ ಹಂತದಲ್ಲಿ ಲಕ್ಷ್ಮಣರಾವ್ ಅಧೀನ ಸಂಸ್ಕೃತಿಯ ಸ್ಥಿತಿಯನ್ನು ತಮ್ಮ 'ಟುವಟಾರ' ಕವಿತೆಯಲ್ಲಿ ಸಮರ್ಥವಾಗಿ ವ್ಯಾಖ್ಯಾನಿಸುತ್ತಾರೆ.

ಟುವಟಾರ
ನ್ಯೂಜಿಲೆಂಡಿನ ಕೆಲವು ದ್ವೀಪಗಳಲ್ಲಿರುವ
ಒಂದು ಸರೀಸೃಪ
ಇದು ಡೈನೋಸಾರ್‌ಗಿಂತ ಹಿಂದಿನದೆಂದು
ಹಲವು ಜೀವಶಾಸ್ತ್ರಜ್ಞರ ಅಂದಾಜು
ಕೋಟ್ಯಾಂತರ ವರ್ಷಗಳ ಜೀವ ವಿಕಾಸದ
ಈ ತಟಸ್ಥ ವೀಕ್ಷಕ
ಬದಲಾವಣೆಯ ಕಡು ವಿರೋಧಿ

ಪರಂಪರೆಯ ಈ ಪ್ರಾಣಿಯ ಬಗ್ಗೆ ಜನರಿಗೆ ಅಪಾರ ಗೌರವ ಭಯ, ನ್ಯೂಜಿಲೆಂಡಿನ ಆದಿವಾಸಿಗಳ ಪುರಾಣದಂತೆ ಟುವಟಾರ ಒಬ್ಬ ಅಗ್ನಿದೇವತೆ.

ನ್ಯೂಜಿಲೆಂಡಿಗೆ ಬಿಳಿಯರು ಆಗಮಿಸುವ ತನಕ
ಟುವಟಾರದ ಜೀವನ
ಸರಾಗವಾಗಿ ನಿರಾತಂಕವಾಗಿ
ಸಾಗಿತ್ತು;

---

೧೧) ಮುನ್ನುಡಿ "ಲಿಲ್ಲಿಪುಟ್ಟಿಯ ಹಂಬಲ" – ಯು.ಆರ್. ಅನಂತಮೂರ್ತಿ

ಆ ನಂತರ ಈ ಬಡಪಾಯಿ
ಬಿಳಿಯರಿಗೆ
ಅವರ ಮಿಶ್ರ ತಳಿಯ ನಾಯಿಗಳಿಗೆ
ಆಟದ ಬೇಟೆಯಾಗಿ
ನಿರ್ವಂಶವಾಗುವ ಸ್ಥಿತಿಗೆ ಬಂತು (ಟುವಟಾರ)

ಆಳುವ ಸಂಸ್ಕೃತಿ ಅಧೀನ ಸಂಸ್ಕೃತಿಯನ್ನು ವ್ಯವಸ್ಥಿತವಾಗಿ ನಾಶ ಮಾಡುತ್ತದೆ. ತನ್ನ ಪರಂಪರೆಯ ಬಗ್ಗೆ ಇತಿಹಾಸದ ಬಗ್ಗೆ ಅವಜ್ಞತೆ ಅಸಹನೆ ಬೆಳೆಸುತ್ತದೆ. ಪರಿಣಾಮವಾಗಿ ತನ್ನನ್ನು ಒಪ್ಪಿಕೊಳ್ಳುವ, ಗೌರವಿಸುವ ಸ್ಥಿತಿ ನಿರ್ಮಾಣ ಮಾಡುತ್ತದೆ.

ಲಕ್ಷ್ಮಣರಾವ್ ವಸಾಹತುಶಾಹಿ ಸಂಸ್ಕೃತಿಯ ಆಕ್ರಮಣ ಶೀಲತೆಯನ್ನು ಗುರುತಿಸುವಂತೆಯೇ ಪರಂಪರೆಯ ಬಗ್ಗೆ ತಾಳುವ ಫ್ಯಾಸಿಸಂ ನಿಲುವನ್ನೂ ಟೀಕಿಸುತ್ತಾರೆ. ಲಕ್ಷ್ಮಣರಾವ್ ಅವರ ಸಮಗ್ರ ಕಾವ್ಯವನ್ನು ಅಧ್ಯಯನ ಮಾಡಿದಾಗ, ವಸಾಹತುಶಾಹಿ ಸಂಸ್ಕೃತಿಗೆ ಸಿಕ್ಕಿ ಬೇರು ಕಳೆದುಕೊಂಡು ತಲ್ಲಣಗೊಂಡ ಜನಾಂಗದ ಅಭಿವ್ಯಕ್ತಿಯಂತೆ ಕಾಣಿಸುತ್ತದೆ. ನವೋದಯಕ್ಕೆ ಪರಂಪರೆಯ ಬಗ್ಗೆ ಗೌರವವಿತ್ತು, ನವ್ಯಕ್ಕೆ ಪ್ರತಿಭಟಿಸಲು ಪರಂಪರೆಯಿತ್ತು. ಲಕ್ಷ್ಮಣರಾವ್‌ಗೆ ಈ ಎರಡೂ ನೆಲೆಗಳಿಲ್ಲ. ಹೀಗಾಗಿಯೇ ಈ ಸಂದಿಗ್ಧತೆ, ಗೊಂದಲ ಒಂದು ರೀತಿಯ ಶಾಪಗ್ರಸ್ತ ಬದುಕು. ಇದು ಇವರ ಕಾವ್ಯದಲ್ಲಿ ಸೋಲಿನ ಭೀತಿಗೆ, ಅಪರಾಧಿ ಮನೋಭಾವಕ್ಕೆ ಕಾರಣವಾಗುತ್ತದೆ.

ಲಕ್ಷ್ಮಣರಾವ್ ಅವರದು ಎಂದೂ ಅಬ್ಬರದ ದನಿಯಲ್ಲ; ಘೋಷಣೆಯ ರೂಪದ ಬಂಡಾಯ ಅವರದಲ್ಲ. ಸಂವಾದ ರೂಪದ ಮಾತುಕತೆ ಆಪ್ತ ದಾಟಿಯಲ್ಲಿಯೇ ಕಾವ್ಯದಲ್ಲಿ ಅಪರೂಪವೆನ್ನಬಹುದಾದ ವಿನೋದ ಪ್ರಜ್ಞೆಯ ಮೂಲಕವೇ ತಮ್ಮ ಪ್ರತಿಭಟನೆಯನ್ನು ಅವರು ದಾಖಲಿಸುತ್ತಾರೆ.

ಅಯ್ಯಾ
ಭಾರತದ ಜನಕೋಟಿಯ
ಶೇಕಡಾ ತೊಂಬತ್ತರಲ್ಲಿ ಒಬ್ಬನೇ
ಭಾರತದ ಅಕ್ಷಿಯೇ
ನಿರಕ್ಷರ ಕುಕ್ಷಿಯೇ
ಇದು ನಿನಗಾಗಿ ಬರೆದ ಕವಿತೆ
ನಿನ್ನ ಗುಣಗಾನ ಉದ್ಧಾರಕ್ಕಾಗಿ ತಿಳಿಯಿತೇ?
ತಿಳಿಯಲಿಲ್ಲವೇ? ಅಡ್ಡಿಯಿಲ್ಲ
ಶತಶತಮಾನಗಳಿಂದ ಅಕ್ಷರಬಲ್ಲ
ನಮ್ಮಂಥವರ ಮಾತು ನಂಬುತ್ತಲೇ ಬಂದಿರುವೆಯಲ್ಲ
ಈಗಲೂ ನಂಬು

ನೀನೆ ಕಣಾ ನಮ್ಮ ದೇಶದ ಬೆನ್ನೆಲುಬು

ಆದ್ದರಿಂದ ಎಲುಬಾಗಿಯೇ ಇರಬೇಕಾದದ್ದು ನಿನ್ನ ಧರ್ಮ

ಉಪವಾಸವಾದರೂ

ವನವಾಸವಾದರೂ

ಭಾರ ಹೊರಬೇಕಾದ್ದು ನಿನ್ನ ಕರ್ಮ (ನಿರಕ್ಷರ ಕುಕ್ಷಿ)

ಇಡೀ ಕವಿತೆಯ ವಿನ್ಯಾಸವನ್ನು ರೂಪಿಸುವುದು ನಾಚಿಕೆಯ ಸ್ಥಾಯಿಭಾವ. ಅಕ್ಷರ ಲೋಕದ ಸವಲತ್ತು ಪಡೆದ ಶೋಷಕ ಜನಾಂಗಕ್ಕೆ ಸೇರಿದ ಕವಿಗೆ ಅಕ್ಷರ ವಂಚಿತ ಸಮುದಾಯದ ಜೊತೆ ಅರ್ಥಪೂರ್ಣ ಸಂಬಂಧ ಸೃಷ್ಟಿಸಿಕೊಳ್ಳಲು ಇದಕ್ಕಿಂತ ಅನ್ಯಮಾರ್ಗ ಬೇರಿಲ್ಲ. ಅನಂತಮೂರ್ತಿಯವರು ಈ ಅಭಿವ್ಯಕ್ತಿ ಮಾರ್ಗದ ಬಗ್ಗೆ ಎತ್ತುವ ಸಂದೇಹವನ್ನು ನಾವಿಲ್ಲಿ ಗಮನಿಸಬೇಕು. "ಸಾಮಾಜಿಕ ಅನ್ಯಾಯಗಳ ಬಗ್ಗೆ ಕೋಪತಾಪದಿಂದ ನಮಗೆ ನಾವೇ ಬರೆದುಕೊಳ್ಳುವುದು. ತುರಿಕಜ್ಜಿಗೆ ಬಿಸಿನೀರು ಹೊಯ್ದುಕೊಳ್ಳುವ 'ರಾವಣಸುಖ' ಪಡೆಯುವುದಷ್ಟಕ್ಕೆ ಮಿತವಾಗಿ ಬಿಡುವಂತೆ ಈ ಬಗೆಯ ನಮ್ಮನ್ನೇ ನಾವು ಛೇಡಿಸಿಕೊಳ್ಳುವ ವ್ಯಂಗ್ಯವೂ ಈಗಾಗಲೇ ನಮಗೆ ಅಂಥ ವಿಷಯಗಳ ಬಗ್ಗೆ ಇರುವ ಅರಿವನ್ನು ಹಿಗ್ಗಿಸಬಲ್ಲ ಶಕ್ತಿಯುಳ್ಳದ್ದೂ ಆಗಲಾರದು. ಕವಿಗಾಗಲೀ ನಮಗಾಗಲೀ ಇದು ನಮ್ಮದೇ ಆದ ಅಸಹನೀಯ ಹಲ್ಲು ನೋವಲ್ಲ. ಆದರೆ ನಮ್ಮದೇ ನೋವು ಎನ್ನಿಸುತ್ತದೆ. ಆಗ ಎಂಥ ಅಭಿವ್ಯಕ್ತಿಯನ್ನು ಹುಡುಕುತ್ತದೆ ಎಂಬುದು ಕಲಾಸಮಸ್ಯೆಯೂ ಆಗಿರುತ್ತದೆ.

ಅನಂತಮೂರ್ತಿಯವರ ಸಂದೇಹವನ್ನು ಒಪ್ಪಿಕೊಂಡು, ಲಕ್ಷ್ಮಣರಾವ್ ಅವರಲ್ಲಿ ಕಾಣಿಸುವ ಈ ನಾಚಿಕೆಯ ಭಾವ ಮುಂದೆ ಆತ್ಮ ವಿಮರ್ಶೆಯ, ಪಶ್ಚಾತ್ತಾಪದ ದನಿ ಪಡೆದು ಇಡೀ ಕಾವ್ಯವನ್ನು ಆವರಿಸಿಕೊಳ್ಳುವುದನ್ನು ನಾವು ಗುರುತಿಸಬಹುದು. ಇದು ಕೇವಲ ತೋರುಗಾಣಿಕೆಯ ಪ್ರದರ್ಶನದ ತೀಟೆ ತೀರಿಸಿಕೊಳ್ಳುವ ಮಾತುಗಳಾಗದೆ, ಕವಿಯನ್ನು ಕಾಡುವ ಒಳದನಿಯಾಗಿ ಅಭಿವ್ಯಕ್ತಿ ಪಡೆಯುತ್ತದೆ.

ಆದ್ದರಿಂದಲೇ ಮುಂದೆ ಲಕ್ಷ್ಮಣರಾವ್ ಅವರಲ್ಲಿ ಸಾಮಾಜಿಕ ಸಮಸ್ಯೆ ಕಾವ್ಯಾಭಿವ್ಯಕ್ತಿಯ ಸಮಸ್ಯೆಯೂ ಆಗಿಬಿಡುತ್ತದೆ. ಕಾವ್ಯ ಮೀಮಾಂಸೆಯ ಚರ್ಚೆಯ ಸಂದರ್ಭದಲ್ಲಿ ಲಕ್ಷ್ಮಣರಾವ್ ಅವರ ಅಭಿವ್ಯಕ್ತಿಯ ಹುಡುಕಾಟದ ಸಮಸ್ಯೆ ಮಹತ್ವದ ಒಂದು ಭಾಗವಾಗಬಲ್ಲದು. ಈ ಹಿನ್ನಲೆಯಲ್ಲಿಯೇ ಅನಂತಮೂರ್ತಿಯವರೇ ಗುರುತಿಸುವಂತೆ ಲಕ್ಷ್ಮಣರಾವ್ ಕಾವ್ಯ ನಾವು ಬಹಿರಂಗವಾಗಿ ಒಪ್ಪಿಕೊಳ್ಳದ ಸತ್ಯಗಳನ್ನು ಹಿತವಾದ ದಾಟಿಯಲ್ಲಿ ಹೇಳಿ ಬಿಡಬಲ್ಲದು. ಸಾಮಾಜಿಕವಾಗಿ ನಾವು ನಿಜಕ್ಕೂ ಚೂಪಾದ ಗುಂಡು ಸೂಜಿಗಳಿದ್ದಂತೆ.

ಲಕ್ಷ್ಮಣರಾವ್ ಕಾವ್ಯಗಳಲ್ಲಿ, ಅಡಿಗರಲ್ಲಿ ಕಾಣುವ ಆತ್ಮ ವಿಶ್ಲೇಷಣೆಯ ಬಗೆ, ಅಷ್ಟು ತೀವ್ರವಾಗಿ ಕಾಣದಿದ್ದರೂ ನಂತರದ ಯಾವ ಕವಿಯಲ್ಲೂ ಲಕ್ಷ್ಮಣರಾವ್ ರೀತಿ ನಮಗೆ ಕಾಣಿಸುವುದಿಲ್ಲ. ಕವಿತೆ ಎಂಬ ಕವಿತೆಯಲ್ಲಿಯೇ ಎಲ್ಲ ಮಡಿವಂತಿಕೆಗಳನ್ನು ಮೀರಿ ಸೃಷ್ಟಿಯ ಚೆಲುವನ್ನು ಆಸ್ವಾದಿಸುವ ಮನೋಭಾವವನ್ನು ಬೆಳೆಸಿಕೊಳ್ಳುವ ಹಂಬಲ ವ್ಯಕ್ತವಾಗುತ್ತದೆ. ಗಾಂಡಲೀನಳ ಜಗತ್ತಿಗಿಂತ ಭಿನ್ನವಾದ ನೆಲೆಯಿದು; ಮಾಗುತ್ತಿರುವ ಬಗೆ ಎನ್ನಬಹುದು. ಇದು ಹೆಚ್ಚು ಕಲಾತ್ಮಕವಾಗಿ ವ್ಯಕ್ತವಾಗುವುದು. 'ಗುಂಡಪ್ಪ ವಿಶ್ವನಾಥ್' ಅಂತಹ ಕವಿತೆಯಲ್ಲಿ..

ಬಿಟ್ಟ ಕಣ್ಣು ನೆಟ್ಟ ನೋಟ ಹಿಗ್ಗಲಿಸಿದ ರೆಪ್ಪೆ

ನಿಶ್ಯಬ್ಧ ಸಿಡಿದ ಗುಂಡು ಕುಸಿದುಬಿತ್ತೆ ಕೋಟೆ?

ಮಧ್ಯಮ ಜನಸಾಮಾನ್ಯರ ದೈನಂದಿನ ಬನಿ

ಮಂದರದೋಂಕಾರದಲ್ಲಿ ಒಳಕ್ಕಳಿದ ಮುನಿ

ನಗರದ ದಟ್ಟಡವಿಯಲ್ಲಿ ಅಪರೂಪದ ದೃಶ್ಯ

ಏಕಾಗ್ರ ಧ್ಯಾನ ಏಕಾಂತ ಏಕಲವ್ಯ

ಪ್ರತಿಭೆ ಅನಾಯಾಸ ಕಡೆದ ಸಹಜ ಸ್ಫೂರ್ತ ಕಾವ್ಯ

(ಗುಂಡಪ್ಪ ವಿಶ್ವನಾಥ್)

ಇಂಥ ಪ್ರತಿಭೆ ಭೋಗ, ಪ್ರಸಿದ್ಧಿ, ಅಹಂ, ಲಂಪಟತನ ಇವುಗಳಿಂದ ತನ್ನ ಕಾಂತಿ ಕಳೆದುಕೊಳ್ಳುವ ದುರಂತ ಕವಿತೆಯ ಎರಡನೆಯ ಘಟ್ಟದಲ್ಲಿ ಪ್ರತಿಭೆ ತನ್ನನ್ನು ತಾನು ನವೀಕರಸಿಕೊಳ್ಳುವ ಬಗ್ಗೆಯನ್ನು ಕವಿ ಚಿತ್ರಿಸುತ್ತಾರೆ. ವೆಂಕಟೇಶಮೂರ್ತಿಯವರ ಅಭಿಪ್ರಾಯದಲ್ಲಿ ಈ ಕವಿತೆ ಲಕ್ಷ್ಮಣರಾವ್ ಅವರ ಅತ್ಯುತ್ತಮ ರಚನೆಗಳಲ್ಲೊಂದು. 'ಅಪರಾಧಂಗಳ ಮನ್ನಿಸೊ' (೧೯೯೨) ಕಾವ್ಯದ ಪ್ರಸ್ತುತತೆಗೆ ಲಕ್ಷ್ಮಣರಾವ್ ಒಡ್ಡುತ್ತಿರುವ ರೂಪಕ. ಜಿ.ಎಸ್.ಆಮೂರರು ಹೇಳುವಂತೆ ಕಾವ್ಯ ಸಿದ್ಧಾಂತಗಳ ಬಗ್ಗೆ ಲಕ್ಷ್ಮಣರಾವ್ ಹೆಚ್ಚು ತಲೆ ಕೆಡಿಸಿಕೊಂಡವರಲ್ಲ. ಜೊತೆಗೆ ಉದ್ದೇಶ ಪೂರ್ವಕವಾಗಿ ಸಮಕಾಲೀನ ಸಾಹಿತ್ಯ ಚಳುವಳಿಗಳ ಹೊರಗೇ ಅವರು ಉಳಿದುಕೊಂಡಿದ್ದಾರೆ. ನೇರವಾಗಿ ಅವರು ತಮ್ಮನ್ನು ಯಾವುದರ ಜೊತೆಗೂ ಗುರುತಿಸಿಕೊಂಡವರಲ್ಲ. ಈಗಾಗಲೇ ಗುರುತಿಸಿರುವಂತೆ ನವ್ಯಕ್ಕಿಂತ ಅವರು ಭಿನ್ನ ಯಾವ ಬಗೆಯ ಹೊರ ಒತ್ತಡಗಳಿಗೂ ಒಳಗಾಗದ ಅಂತರ್ಜಲವನ್ನೇ ನೆಮ್ಮಿದ ಅವರ ಕಾವ್ಯ ರೀತಿ ಅಧ್ಯಯನ ಯೋಗ್ಯವಾದುದು.

ಕಾವ್ಯ ಸಿದ್ಧಾಂತಗಳ ಬಗ್ಗೆ ಲಕ್ಷ್ಮಣರಾವ್‌ಗೆ ಅಂತಹ ಆಸಕ್ತಿ ಇಲ್ಲದಿದ್ದರೂ ಕಾವ್ಯದ ಪ್ರಸ್ತುತತೆಯ ಬಗ್ಗೆ ಸೃಜನಶೀಲತೆ ಎದುರಿಸುತ್ತಿರುವ ಬಿಕ್ಕಟ್ಟುಗಳ ಬಗ್ಗೆ ಅವರಿಗೆ ಆತಂಕವಿದೆ.

ನವ್ಯ ಕಾವ್ಯ ಪ್ರತಿಮೆಯೇ,
ಪ್ರೀತಿಯೇ, ನೆಮ್ಮದಿಯೇ,
ಉಲ್ಲಾಸದ ಚಿಲುಮೆಯೇ,
ಸಲ್ಲದ ಈ ಹೊತ್ತಿನಲ್ಲಿ
ಸುತ್ತಲ ಆಪತ್ತಿನಲ್ಲಿ
ಎಲ್ಲಡಗಿರುವೆ?
ಏನಾಗಿರುವೆ? (ಪ್ರತಿಮೆ)

ಆ ಆರ್ತತೆ, ಆತಂಕ ಅವರಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ನಾನು ಈ ಮೊದಲೇ ಸೂಚಿಸಿದ ಹಾಗೆ ಇದು ಜಡಗೊಂಡಿರುವ ಸಮಾಜವನ್ನು ಚಲನಶೀಲಗೊಳಿಸುವ ಪ್ರಯತ್ನವೂ ಹೌದು. ಹೀಗಾಗಿಯೇ ಸಾಮಾಜಿಕವಾಗಿಯೂ ಲಕ್ಷ್ಮಣರಾವ್ ಪ್ರಸ್ತುತ,

ಮಗನೇ, ನೋಡು

ನನ್ನ ಕವಿತೆಯನ್ನು;

ಇದು ಸಹ ನಿನ್ನಂತೆ

ಖಿನ್ನ (ಅದಮ್ಯ)

ಸಿಕ್ಕಿ ಬಿದ್ದೆ

ಪದ ಜಾಲದಲ್ಲಿ;

ಇನ್ನು, ಮೋಕ್ಷವೆಲ್ಲಿ? ಪದಜಾಲ

ನಾ ಹೆದರಿದ್ದೇನೆ, ನಿಜ

ಸಹಜ, ಆದರೂನೂ

ಈ ಬಾರಿಯೂ ನನ್ನೇ

ಚಿತ್ರೀಕರಿಸುತ್ತೇನೆ. ಏಕೆಂದರೆ

ಇದೊಂದೇ ನಾನು ಬಲ್ಲ ಕೌಶಲ

ಕಾಯಕ (ಏಕೆಂದರೆ)

ಲಕ್ಷ್ಮಣರಾವ್ ಅವರಿಗೆ ಸೃಜನಶೀಲತೆಯ ಬಗೆಗೆ ಅಖಂಡ ನಿಷ್ಠೆ. ಕಾವ್ಯ ಉಸಿರಾಟದಷ್ಟೇ ಅವರಿಗೆ ಅಗತ್ಯ. ಕಾವ್ಯ ಸೃಜನಶೀಲತೆ ಬದುಕಿಗೆ ಅರ್ಥ ತಂದುಕೊಡಬಲ್ಲುದೆಂಬುದು ಅವರ ಖಚಿತ ನಂಬಿಕೆ. ಆದರೆ ಅದನ್ನು ನವೀಕರಿಸಿಕೊಳ್ಳುವ, ಪ್ರಸ್ತುತಗೊಳಿಸಿಕೊಳ್ಳುವ ಅನಿವಾರ್ಯತೆಯಿದೆ. ಸೃಜನಶೀಲ ಮನಸ್ಸು ಮಾತ್ರ ಸಮಕಾಲೀನ ಸಮಸ್ಯೆಗಳಿಗೆ, ಹೊಸ ಸವಾಲುಗಳಿಗೆ ಸಮರ್ಥವಾಗಿ ಮುಖಾಮುಖಿಯಾಗಬಲ್ಲುದು. ಈ ನಂಬಿಕೆ, ಈ ಹುಡುಕಾಟ ಲಕ್ಷ್ಮಣರಾವ್ ಕಾವ್ಯವನ್ನು ಜೀವಂತವಾಗಿರಿಸಿದೆ.

ಕನ್ನಡದಲ್ಲಿ ಪ್ರಚಲಿತವಿರುವ ಹಲವು ಕಾವ್ಯ ಪಂಥಗಳ ನಡುವೆ ಲಕ್ಷ್ಮಣ್‌ರಾವ್ ಎಲ್ಲಿ ನಿಲ್ಲುತ್ತಾರೆ. ನೋಡಲು ಅವರ 'ಲಿಲ್ಲಿಪುಟ್ಟಿಯ ಹಂಬಲ'ಸಂಕಲನವನ್ನು ಬಳಸಬಹುದು.

---

೧೨) ಯು.ಆರ್.ಅನಂತಮೂರ್ತಿ (ಲಿಲ್ಲಿ ಪುಟ್ಟಿಯ ಹಂಬಲ ಮುನ್ನುಡಿ)

ಕವಿತೆ ಕನಿಷ್ಠ ನೈಜವೆನಿಸಲು ಅದು ಕೈಯಲ್ಲಿ ಬಚ್ಚಿಟ್ಟುಕೊಂಡ ಮಿಣುಕು ದೀಪವಾದರೂ ಆಗಿರಬೇಕು. ಕವಿಯ ವ್ಯಕ್ತಿತ್ವದ ಜೀರ್ಣಶಕ್ತಿ ಬೆಳೆದು, ಪರಕಾಯ ಪ್ರವೇಶ ಮಾಡಬಲ್ಲ ನಿರಹಮಿಕೆಯನ್ನೂ, ಸೂಕ್ಷ್ಮ ಗ್ರಾಹಿತ್ವವನ್ನೂ ಅದು ಪಡೆಯುತ್ತಾ ಹೋದಂತೆ ವೈಯಕ್ತಿಕ ಪ್ರಾಮಾಣಿಕತೆ ತನ್ನ ಸ್ವಂತದ ಬೆಳಕನ್ನು ಹೊತ್ತಿನ ಮುಖಕ್ಕೆ ತಿವಿಯಬಲ್ಲ ಶಕ್ತಿಯುಳ್ಳದ್ದಾಗುತ್ತದೆ. ಕವಿ ತನ್ನ ಜನಾಂಗದ ಅನುಭವದಲ್ಲಿ ತೊಯ್ದು ಉರಿಯುವ ಬತ್ತಿಯಾಗುತ್ತಾನೆ. ಈವರೆಗೆ ತನ್ನ ಸ್ವಂತಿಕೆ ಮೆರೆದ ಕವಿಯಾದ ಲಕ್ಷ್ಮಣ್‌ರಾವ್‌ನಿಂದ ಕಾವ್ಯ ಪ್ರಿಯರು ಈ ಬಗೆಯ ಮೀರುವಿಕೆ ನಿರೀಕ್ಷಿಸುತ್ತಿದ್ದಾರೆ. ಅಂತ ಪ್ರಯತ್ನವನ್ನು ತನ್ನ ಸ್ವಂತಿಕೆ ಕಳಕೊಳ್ಳದಂತೆ ಲಕ್ಷ್ಮಣ್ ಸಾಧಿಸಿದ್ದಾರೆಯೇ ಎಂಬುದು ಮೊದಲ ಪದ್ಯ 'ನಿರಕ್ಷರ ಕುಕ್ಷಿ'ಯನ್ನು ಕಣ್ಣಿಟ್ಟು ಪರೀಕ್ಷಿಸಿದಲ್ಲಿ ಈ ಕಾಲದ ಬರೆವಣಿಗೆಯು ಕೆಲವು ಸಮಸ್ಯೆಗಳು ಸ್ಪಷ್ಟವಾಗಬಹುದು. ಈ ಪದ್ಯವನ್ನು ಕವಿ ಸಭೆಯೊಂದರಲ್ಲಿ ಓದುವಾಗ ನನ್ನ ಮನಸ್ಸು ಹೇಗೆ ಸ್ಪಂದಿಸುತ್ತದೆ ನೋಡುವೆ. 'ಭಾರತದ ಜನಕೋಟಿಯ ಶೇಕಡಾ ತೊಂಬತ್ತರಲ್ಲಿ ಒಬ್ಬನಾದ' ನಿರಕ್ಷರ ಕುಕ್ಷಿಗೇ ತಮ್ಮ ಮಾತುಗಳನ್ನು ಕವಿ ಹೇಳುತ್ತಿದ್ದಾರೆ. ಈಗ ನಿರಕ್ಷರನಾದ್ದರಿಂದ ಈ ಪದ್ಯವನ್ನು ಓದಲಾರ ಕೇವಲ ಕೇಳಿಸಿಕೊಳ್ಳಬಲ್ಲ, 'ಇದು ನಿನಗಾಗಿ ಬರೆದ ಕವಿತೆ' ಎನ್ನುತ್ತ ಅವನನ್ನು ಕರಿಯನೇ, ಕ್ಯಾತನೇ ಅಥವಾ ಅರೆಹೊಟ್ಟೆ ಸುಬ್ಬನೇ' ಎಂದು ಕರೆಯುತ್ತಾರೆ.

ವಾಚ್ಯದಲ್ಲಿ ಹೀಗಿದ್ದರೂ ವ್ಯಂಗ್ಯಾರ್ಥ ಬೇರೆಯಾಗುವುದಕ್ಕೆ ಕವಿಯ ಭಾಷ ಪ್ರಯೋಗ ಮಾತ್ರ ಕಾರಣವಲ್ಲ. ವಾಚನ ಸಂದರ್ಭವೂ ಕಾರಣವಾಗುತ್ತದೆ. ಯಾಕೆಂದರೆ ಕವಿಯ ಕಣ್ಣೆದುರು ಸಭೆಯಲ್ಲಿರುವುದು ನಿಜವಾಗಿ ನಾವು, ಓದಬಲ್ಲವರು ನಮ್ಮೊಡನೆ ಕೂತಿರದ ನಿರಕ್ಷರ ಕುಕ್ಷಿಯನ್ನು ಸಂಬೋಧಿಸಿ ಆಡುವ ಈ ಮಾತುಗಳನ್ನು ಕೇಳಿಸಿಕೊಳ್ಳುವ ನಮ್ಮ ಪ್ರತಿಕ್ರಿಯೆ ಹೇಗಿಉರತ್ತದೆ ನೋಡೋಣ.

ನೀ ಕೊಟ್ಟ ವಿರಾಮದಿಂದಲೇ ಈ ಸಾಹಿತ್ಯ ಸಂಸ್ಕೃತಿ, ಸಂಗೀತ ಇತ್ಯಾದಿ

ನೀ ಕೊಟ್ಟ ವೋಟಿನಿಂದ ಈ ರಾಜಕಾರಣ, ಈ ವೈಭವ, ಈ ಗಾದಿ

ನೀನೆ ಕಣಾ ನಮ್ಮ ದೇಶದ ಬೆನ್ನೆಲುಬು ಆದ್ದರಿಂದ

ಎಲುಬಾಗಿಯೇ ಇರಬೇಕಾದ್ದು ನಿನ್ನ ಧರ್ಮ

ಬಾರ ಹೊರಬೇಕಾದ್ದು ನಿನ್ನ ಕರ್ಮ

ಇದನ್ನು ಕೇಳಿಸಿಕೊಳ್ಳುವಾಗ ನಮ್ಮ ಬಗ್ಗೆ ನಮಗೇ ನಾಚಿಕೆಯಾಗಬೇಕು ಅಲ್ಲವೆ? ಕವಿ ಕೂಡ ತನ್ನ ಬಗ್ಗೆ ನಾಚಿಕೆಯುಳ್ಳವನೆ. ಆದರೆ ಕವಿ ನಾಚಿಕೆಗೆ ಹರಿತವಾದ ಮಾತು ಕೊಡಬಲ್ಲ ಜಾಣ. ಅಂದ ಮಾತ್ರಕ್ಕೆ ಕವಿಯೇನೂ ಕ್ಷಮ್ಯನಲ್ಲವೆಂದು ಪದ್ಯದ ಒಟ್ಟು ಧಾಟಿ ಹೇಳುವಂತೆ ಕಂಡರೂ, ನಾವು ನಮ್ಮ ಧೋರಣೆಗಳ ಬಗ್ಗೆ ನಾಚುವಂತೆ ಮಾಡಬಲ್ಲ ಮಾತುಗಾರಿಕೆಯ ಸುಖ ಕವಿಗೂ, ವಾಚ್ಯಕ್ಕೂ ವಿರೋಧವಾದ ವ್ಯಂಗ್ಯವನ್ನು ಸ್ವೀಕರಿಸುವ ಸುಖ ನಮಗೂ ಕವನದಿಂದ ಸಿಗುತ್ತಿದೆ ಎನ್ನಬಹುದು.

ಬಂಡಾಯ ಸಾಹಿತ್ಯ ಆಂದೋಲನದ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಈ ಕವನದ ಒಟ್ಟು ಧಾಟಿ ಧೋರಣೆಗಳನ್ನು ಇಟ್ಟು ನೋಡಬೇಕು. ಸಾಮಾಜಿಕ ಕಾಳಜಿ ಕವಿಗೆ ಅಗತ್ಯವೆಂಬ ಧೋರಣೆಯಿಂದ ಲಕ್ಷ್ಮಣ್‌ರಾವ್ ಪ್ರಭಾವಿತರಾಗಿದ್ದಾರೆ.

ಆದರೆ ಕವಿ ತನ್ನ ಈ ಕವನ ಓದುವ ಸಂದರ್ಭದಲ್ಲೆ ನಿರಕ್ಷರ ಕುಕ್ಷಿ ಇಲ್ಲ; ಆದ್ದರಿಂದ ಅವನಿಗೆ ಕೋಪ ಹುಟ್ಟುವಂತೆ ಬರೆದು ಓದಿದಲ್ಲಿ ಅದು ಕೇವಲ ಚೀರುವಿಕೆಯಾಗಿ ಬಿಡುತ್ತದೆ. ಆದ್ದರಿಂದ ನಮ್ಮ ಧೋರಣೆಗಳ ಬಗ್ಗೆಯೇ ನಾಚಿಕೆಯನ್ನಾದರೂ ಉಂಟು ಮಾಡುವುದು ಮಾತ್ರ ಸಾಧ್ಯವೆಂದು ಪ್ರಾಮಾಣಿಕವಾಗಿ ಕವಿಗೆ ಅನ್ನಿಸಿದೆ. ನಾಚಿಕೆಯಲ್ಲಾದರೂ ಕೊಂಚ ನೈತಿಕಪ್ರಜ್ಞೆ ಚಿಗುರಬಹುದೆಂಬ ಭರವಸೆ ಈ ಬಗೆಯ ನಿಲುವಿನ ಹಿಂದಿದೆ.

ಈ ನಾಚಿಕೆ ಯಾವ ಬಗೆಯದು? ಎಷ್ಟು ಆಳವಾದ್ದು ಆಗುವುದು ಸಾಧ್ಯವೆಂಬುದನ್ನು ಆಲೋಚಿಸುವಾಗ ಇನ್ನೊಂದು ಪ್ರಶ್ನೆ ಎದುರಾಗುತ್ತದೆ. ಇಂಥ ಪದ್ಯಗಳ ವಾಚನ ಸಂದರ್ಭದಲ್ಲಿ ಇರುವುದು 'ನಾನು' 'ನೀನು' ಮಾತ್ರವಲ್ಲ.'ಅವನೂ' ಇದ್ದಾನೆ. ಕವಿ ಮತ್ತು ನಾವು ಪದ್ಯ ಖಂಡಿಸುತ್ತಿರುವ ಶೋಷಕ ವರ್ಗಕ್ಕೆ ಸೇರಿದವರೇ. ಆದರೂ, ಶೋಷಕ ಧೋರಣೆ ಖಂಡಿಸಬಲ್ಲ, ಖಂಡಿಸಿದ್ದನ್ನು ಮೆಚ್ಚಬಲ್ಲ ಸೂಕ್ಷ್ಮಜ್ಞರೂ ಆದ್ದರಿಂದ ಪದ್ಯ ಖಂಡಿಸುತ್ತಿರುವ ಧೋರಣೆ ಪರಿಣಾಮದಲ್ಲಿ ಭಂಡ ಸುಲಿಗೆಗಾರನಾದ 'ಅವನದು' ಮಾತ್ರ ಆಗಿ ಬಿಡುತ್ತದೆ. ಈ 'ಅವನು' ನಾನು ಆಗಿದ್ದರೆ ಪದ್ಯದ ವ್ಯಂಗ್ಯ ನನಗೆ ಹಿಡಿಸಬಾರದು; ಅಥವಾ ಈ 'ಅವನು+ನಾನು'ಗೆ ಪದ್ಯದ ಅನಿಸಿಕೆ ತೀವ್ರವಾದದ್ದಾದರೆ. ಈ ಬಗ್ಗೆಯೆ ನಮ್ಮ ಕೆನ್ನೆಗೆ ನಾವೇ ಹೊಡೆದುಕೊಳ್ಳುವ ಸುಖಪಡುವುದು ಅಸಹನೀಯಾಗಬೇಕಿತ್ತು.

ಸಾಮಾಜಿಕ ಅನ್ಯಾಯಗಳ ಬಗ್ಗೆ ಕೋಪತಾಪದಿಂದ ನಮಗೆ ನಾವೇ ಬರೆದುಕೊಳ್ಳುವುದು ತುರಿಕಜ್ಜಿಗೆ ಬಿಸಿನೀರು ಹೊಯ್ದುಕೊಳ್ಳುವ 'ರಾವಣ ಸುಖ' ಪಡೆಯುವುದಷ್ಟಕ್ಕೇ ಮಿತವಾಗಿ ಬಿಡುವಂತೆ ಈ ಬಗೆಯ ನಮ್ಮನ್ನೇ ನಾವು ಛೇಡಿಸಿಕೊಳ್ಳುವ ವ್ಯಂಗ್ಯವೂ, ಈಗಾಗಲೇ ಅಂಥ ವಿಷಯಗಳ ಬಗ್ಗೆ ಇರುವ ಅರಿವನ್ನು ಹಿಗ್ಗಿಸಬಲ್ಲ ಶಕ್ತಿಯುಳ್ಳದ್ದೂ ಆಗಲಾರದು. ಹೀಗಾಗಿ ವಸ್ತುವಿಗೂ (ಸಾಮಾಜಿಕ ಅನ್ಯಾಯ) ಕವಿಗೂ (ಪಾಲುದಾರನಾಗಿದ್ದು ಅದನ್ನು ಕಾಣಬಲ್ಲವ) ನಮಗೂ (ಕವಿಯಂಥ ಸೂಕ್ಷ್ಮಜ್ಞರು, ಆದ್ದರಿಂದ ಅವರನ ಹಾಗೆ ಭಂಡ ಸುಲಿಗೆಗಾರರಲ್ಲ) ಏರ್ಪಡುವ ಸಂಬಂಧ ಕ್ರೂರ ಮಾತಿನ ಕೋಪದಲ್ಲಾಗಲೀ, ಕೇವಲ ವ್ಯಂಗ್ಯದಲ್ಲಾಗಲೀ, ಆಳವಾದ ತಿಳಿವು ಹುಟ್ಟಿಸಬಲ್ಲ ನೈತಿಕ ಭಾವನೆಯದಾಗುವುದು ಸಾಧ್ಯವಿಲ್ಲ.

ಕವಿಗಾಗಲೀ, ನಮಗಾಗಲೀ, ಇದು ನಮ್ಮದೇ ಆದ ಅಸಹನೀಯ ಹಲ್ಲುನೋವಲ್ಲ. ಆದರೆ ಆ ನೋವು ನಮ್ಮದೇ ಎನ್ನಿಸಿದರೆ ಆಗ ಎಂಥ ಅಭಿವ್ಯಕ್ತಿಯನ್ನದು ಹುಡುಕುತ್ತದೆ ಎಂಬುದು ಕಲಾ ಸಮಸ್ಯೆಯೂ ಆಗಿರುತ್ತದೆ. ಭಾಗ್ಯವಂತ ವರ್ಗಕ್ಕೆ ಸೇರಿದವನೊಬ್ಬನ ಸಾಮಾಜಿಕ ನ್ಯಾಯದ ಬಯಕೆ ಕ್ರಿಯೆಯಲ್ಲಿ ಎಷ್ಟೋ ಕಲೆಯಲ್ಲೂ ನೈಜವಾಗಲು ರೂಢಿಯ ಹುಸಿಭಂಗಿಗಳನ್ನು ಬಿಟ್ಟು ಹೊಸದಾರಿಗಳನ್ನು ಹುಡುಕಿಕೊಳ್ಳುವ ಸಮಸ್ಯೆ ಅದು. ಪ್ರೇಮ ದೇವರು, ಪ್ರಕೃತಿ, ಸಾವು ಎಂಥ ವಿಷಗಳಲ್ಲಿ ಎಲ್ಲ ಕಾಲಗಳಲ್ಲೂ ತಾಜಾಕಾವ್ಯ ಹುಟ್ಟಿದಂತೆ, ತಾನು ಸಮುದಾಯದ ಒಂದು ಅಂಗ ಎಂಬುದರಿಂದ ಹುಟ್ಟುವ ಭಾವನೆ ಸಂತೋಷದ ಭಾಗಿತ್ವದ ಸಂದರ್ಭದಲ್ಲಿ ನೈಜವಾಗುವಂತೆ ನೋವಲ್ಲೂ ನೈಜವಾಗುವುದು ಹೇಗೆಂಬುದು ಈ ನಮ್ಮ ಕಾಲದ ಮುಖ್ಯ ರಾಜಕೀಯ ಕಲಾ ಸಮಸ್ಯೆ ನಮ್ಮ ವರ್ಗಕ್ಕೆ ಎನ್ನಬಹುದು. ವರ್ಗ, ಜಾತಿಗಳಿಂದ ಮುಕ್ತರಾಗಲು ಸಾಹಿತಿಗಳು ಬೋಹಿಮಿಯನ್ನರಾಗಬಹುದು. ಅವಧೂತರಾಗಬಹುದು. ಅಥವಾ ಶೋಷಿತ ವರ್ಗಕ್ಕಾಗಿ ದುಡಿಯುವ ಎಡಪಕ್ಷದ ಸಕ್ರಿಯ ಕೆಲಸಗಾರರಾಗಬಹುದು. ಈ ಮೂರು ಕ್ರಮಗಳಲ್ಲೂ ತನ್ನ ಪರಿಮಿತ ಜೀವನ ಕ್ರಮ ಮತ್ತು ಪ್ರಜ್ಞೆಗಳಿಂದ ಹೊರಬರುವ ಸನ್ನಾಹವಿದೆ.

---

೧೩)ಯು.ಆರ್.ಅನಂತಮೂರ್ತಿ (ಲಿಲ್ಲಿ ಪುಟ್ಟಿಯ ಹಂಬಲ ಮುನ್ನುಡಿ)

ಈ ಮೂರು ಬಗೆಗಳು ಎಷ್ಟು ಯಾರನ್ನು ಕನ್ನಡದಲ್ಲಿ ಆಕರ್ಷಿಸುತ್ತಿವೆ ಎಂಬುದು ಕುತೂಹಲಕಾರಿಯಾದ ಹೊಸ ಬೆಳಕನ್ನು ಸದ್ಯದ ಸಾಹಿತ್ಯದ ಬಗ್ಗೆ ಚೆಲ್ಲಬಲ್ಲದು.

'ವಿಚಿತ್ರ'ದಂಥ ಪದ್ಯ ಮೇಲೆ ಚರ್ಚಿಸಿದ ಮುಜುಗರಗಳಿಗೆ ಕಾರಣವಾಗುವುದಿಲ್ಲ. ಒಳಿತು, ಕೆಡುಕು, ಉದಾತ್ತ, ವಿಕೃತಗಳ ಬೆರಕೆ ಜೀವನದಲ್ಲಿಯಂತೆಯೇ, ಕವಿತೆಯ ಸಾಲುಗಳ ಶಬ್ದ ಪ್ರಯೋಗದಲ್ಲೂ ಇರುವುದರಿಂದ ನಮ್ಮ ಕುತೂಹಲವನ್ನು ಕವನ ಕಾದಿಡುತ್ತದೆ. ಓದುಗನಿಂದ ಹೆಚ್ಚು ಬಯಸದಂತೆ ಅವನನ್ನು ಕಾಡದಂತೆ ಅವನಿಗೆ ಬೆರಗಿನಲ್ಲಿ ಚೂರು ಹೊಸದೇನನ್ನೋ ಕಾಣಿಸಬಲ್ಲ ಲಕ್ಷ್ಮಣ್‌ರಾವ್ ಕಲೆಯ ನೈಜನೆಲೆ ಈ ಪದ್ಯದ ಬಗೆಯದೇ ಇರಬಹುದು ಎನ್ನಿಸುತ್ತದೆ. ಈ ಬಗೆಯ ಸಾಧನೆಯನ್ನು 'ತೂರ್ಯ' 'ಕಡಲತೀರದಲ್ಲಿ' 'ಸ್ವಗತ' 'ನತ್ತು' 'ಮಿತಿ', 'ಎಚ್ಚರ' 'ಪಾಂಚಾಲಿ'ಗಳಲ್ಲೂ ಕಾಣಬಹುದು. ಇವು ಅಪ್ಪಟ ಲಕ್ಷ್ಮಣ್‌ರಾವ್‌ರವರ ಕವನಗಳು 'ಬಯಲು' ಪದ್ಯವಂತೂ ಬೌದ್ಧಿಕ ಚಟಾಕಿಯಾಗಿದ್ದೂ ನಮ್ಮ ಒಳ ಜೀವನದ ರಹಸ್ಯವಾದ ಸತ್ಯವನ್ನು ಹಗುರಾಗಿ ಹೇಳಿಬಿಡುತ್ತದೆ. ಯಾವೊಂದು ಸಾಲೂ ಸುಂದರವೆನಿಸದಿದ್ದರೂ ತನ್ನ ಮಿತಿಯೊಳಗೆ ಪ್ರತಿ ಪದ್ಯವೂ ಒಂದೊಂದು ಭಾವನೆಯನ್ನು ಸ್ಪಷ್ಟವಾಗಿ ಅಚ್ಚುಕಟ್ಟಾಗಿ ಹೇಳುತ್ತದೆ. ಲಕ್ಷ್ಮಣ್‌ರಾವ್ ಭಾಷೆಗೆ ಹಗುರವಾದ್ದನ್ನೂ, ಗಂಭೀರವಾದ್ದನ್ನೂ ನೈಜವಾಗಿ ನಿರ್ವಹಿಸುವ ಶಕ್ತಿ ಇದೆ ಎಂಬುದಕ್ಕೆ ಇವರು ಮಾಡಿರುವ 'ಏಟ್ಸ್ ನೆನಪಿಗಾಗಿ' ಮತ್ತು 'ಭಗ್ನ ಪ್ರತಿಮೆಗಳಲ್ಲಿ' ಅನುವಾದಗಳು ಒಳ್ಳೆಯ ನಿದರ್ಶನಗಳು ನಾವು ಬಹಿರಂಗವಾಗಿ ಒಪ್ಪಿಕೊಳ್ಳದ ಸತ್ಯಗಳನ್ನು ಲಕ್ಷ್ಮಣ್‌ರಾವ್ ಹಿತದಾಟಿಯಲ್ಲಿ ಹೇಳಿ ಬಿಡಬಲ್ಲರು.

ದೊಡ್ಡ ಕವಿಗಳೆಲ್ಲಾ ಬರೆದದ್ದೆಲ್ಲವೂ ಒಂದಕ್ಕೊಂದು ಕೂಡಿ ಮೊತ್ತವಾಗುತ್ತಾ, ಹೋದಂತೆ ಇವು ಆಗುವುದಿಲ್ಲ. ನಿಜ ಆದರೆ ಸಾಮಾಜಿಕವಾಗಿ ನಾವು ಒಪ್ಪಿಕೊಳ್ಳದ ಸತ್ಯಗಳನ್ನು ಗಮನಿಸಲು ನಮಗೆ ಕಲಿಸುವ ಇಂಥ ಪದ್ಯಗಳು ನಿಜದ ಚೂಪು ಗುಂಡು ಸೂಚಿಗಳಿದ್ದಂತೆ. ಇವು ಚೂಟಿಯೋ ಚುಚ್ಚಿಯೋ, ತುಂಟಾಗಿ ನಕ್ಕೋ ನಮ್ಮ ಸಂಸ್ಕೃತಿಯ ಜಾಡ್ಯಗಳಲ್ಲಿ ಒಂದಾದ ಊದಿಕೊಳ್ಳುವ Confesional sublimeಗೆ ನಿಧಾನವಾಗುತ್ತವೆ.

ಲಕ್ಷ್ಮಣ್‌ರಾವ್ ಖುಷಿಪಡುವ ಕೊಡುವ ಕವಿ ಕೂಡ ಬೀಸಿದ

ಕಲ್ಲು ಗಾಜನ್ನು ಒಡೆದಾಗಲೂ ಇವರು ಕಾಣುವುದು;

ಚೆಲ್ಲಾ ಪಿಲ್ಲಿ ಬಿದ್ದ

ಗಾಜಿನ ಒಂದೊಂದು ತುಣುಕಿನಲ್ಲಿ

ಒಬ್ಬೊಬ್ಬ ಸೂರ್ಯ

ತನ್ನ ತೂರ್ಯ ಮೊಳಗಿದ

ಸಭೆಯಲ್ಲಿ ಕೂತಿರುವಾಗ ನಮಗೆ ನಮ್ಮ ನಮ್ಮ ಖಾಸಗಿ ನಿಜಗಳನ್ನು ನೆನಪು ಮಾಡಿಕೊಡುವುದರ ಮೂಲಕ ಚುಚ್ಚಿ, ಎಚ್ಚರಿಸುವ ಲಕ್ಷ್ಮಣ್‌ರಾವ್ ಪದ್ಯಗಳಲ್ಲಿ ಮುಖ್ಯವಾದ ಕೆಲವು ನಾವು ನಮಗೇ ಓದಿಕೊಂಡಾಗ ಅಷ್ಟು ಪರಿಣಾಮಕಾರಿಯಾಗುವುದಿಲ್ಲ. ಜನ ಸಮ್ಮುಖದಲ್ಲಿ ಕವಿ ಸುಳ್ಳಾಗದಂತೆ

ಮಾತಾಡಬಲ್ಲರೆಂಬುದು ಕವಿಯ ಪ್ಲಸ್ ಪಾಯಿಂಟಾಗಲು ಕವಿಯ ಪ್ರತಿಭೆ ಎಷ್ಟು ಕಾರಣವೋ, ಅಷ್ಟೇ ನಮ್ಮ ಬಹಿರಂಗ ಸಾಮಾಜಿಕ ನಿಲುವುಗಳ ಹುಸಿತನವೂ ಕಾರಣವಿರಬಹುದು.

ಕವಿತೆ ಪದ್ಯದಲ್ಲಿ ಬರುವ ಈ ಸಾಲುಗಳು

ಇವುಗಳನ್ನು

ನನ್ನ ಕ್ಲೀಷೆ ಭಾಷೆಯ

ಸತ್ತ ಕಾವ್ಯಾಲಂಕಾರಗಳಿಂದ ವರ್ಣಿಸಿ

ಆ ಅಪರೂಪ ಸೌಂದರ್ಯಕ್ಕೆ ಅವಮಾನ ಮಾಡಲು

ಹಾಗೂ ನಿಮ್ಮ ಕಲ್ಪನಾ ಲಹರಿಗೆ ಧಕ್ಕೆ ತರಲು

ನನಗೆ ಖಂಡಿತ ಇಷ್ಟವಿಲ್ಲ.

ವೈಯಕ್ತಿಕವಾಗಿ ನನಗೆ ಬೇಕಿಲ್ಲ. ಸಭೆಯಲ್ಲಿದ್ದಾಗ ಅಕ್ಕಪಕ್ಕದವರ ಮಡಿವಂತಿಕೆ ಭಾವಿಸಿಕೊಂಡು ಕವಿ ಈ ಪದ್ಯದಲ್ಲಿ ಹೇಳುವ ಸತ್ಯದಿಂದ ನಾನು ಖುಷಿಪಡಬಲ್ಲೆ- ಅಷ್ಟೆ. ಆದರೆ ನಾವು ಏಕಾಂಗಿಗಳಾಗಿದ್ದಾಗ ಏನನ್ನು ಭಾವಿಸುತ್ತೇವೆಯೋ, ಚಿಂತಿಸುತ್ತೇವೆಯೋ ಅದರಲ್ಲೇ ನಮ್ಮ ನಿಜ ಹೆಚ್ಚಿರಬಹುದು. ಪರಸ್ತ್ರೀ ಹುಟ್ಟಿಸಿದ ಸಂತೋಷದಿಂದ ಸ್ವಂತ ಹೆಂಡತಿ ಮಕ್ಕಳ ಬಗ್ಗೆ ನಮ್ಮ ಅರಿವನ್ನು ಹೆಚ್ಚಿಸುತ್ತದೆ ಎಂಬುದಕ್ಕೆ ಈ ಕವಿತೆ ಮುಖ್ಯವಾದದ್ದು. ಈ ಪರಸ್ತ್ರೀ ತನ್ನನ್ನು ಆಕರ್ಷಿಸಿದ ಕ್ರಮವನ್ನೂ ಕೆಟ್ಟದಾಗಿರದಂತೆ ಕವಿ ನಿರೂಪಿಸಿದ್ದಾರೆ. ನಮ್ಮಲ್ಲಿ ಮುಚ್ಚಿಕೊಂಡಿರಬಹುದಾದ ಜೀವನೋಲ್ಲಾಸದ ಬುಗ್ಗೆಗಳನ್ನು ಮೃದುವಾಗಿ ತಟ್ಟಿ ಲಕ್ಷ್ಮಣ್‌ರಾವ್ ಉಕ್ಕಿಸಬಲ್ಲರು. ನಮ್ಮ ಮನಸ್ಸನ್ನು ಒಲಿಸಿಕೊಳ್ಳಲು ಕವಿ ಆಕ್ರಮಣಕಾರಿಯಾದ ರೆಟರಿಕ್ಕನ್ನು ಆಶ್ರಯಿಸುವುದಿಲ್ಲ.

'ಸಂದಿಗ್ಧ', 'ವಾ-ನರಗೀತೆ' 'ಬೇಲಿ' ಈ ಪದ್ಯಗಳಲ್ಲಿ ಕವಿ ತನ್ನ ಈವರೆಗಿನ ಬಗೆಯುವ ಕ್ರಮಗಳನ್ನು ಮೀರಲು ನೋಡಿದ್ದಾರೆಂಬ ಕಾರಣದಿಂದ ಈ ಪದ್ಯಗಳು ಲಕ್ಷ್ಮಣ್‌ರಾವ್ ಕಾವ್ಯ ಸಂದರ್ಭದಲ್ಲಿ ಮುಖ್ಯವಾಗುತ್ತದೆ.

'ಸಂದಿಗ್ಧ' ನಾವು ನಿರೀಕ್ಷಿಸುವ ದಾಟಿಗೆ ಭಿನ್ನವಾಗಿದೆ. ತರಗೆಲೆಯಂತೆ ಕಂಡದ್ದು ಚಿಟ್ಟೆಯಾಗುತ್ತದೆ. ಅದು ಹಾರಿದ್ದನ್ನು ಕಂಡು ಕವಿ ದಂಗಾಗುತ್ತಾರೆ. ಈ ಸಂಗತಿಯನ್ನು "ಪ್ರಭೂ/ಇಂಥ ಸಂದಿಗ್ಧದಲ್ಲಿ ನನ್ನನ್ನೇಕೆ ನಿಲ್ಲಿಸಿದೆ?" ಎಂಬ ಆರ್ತ ಪ್ರಶ್ನೆಯಿಂದ ಚಿಂತಿಸುವುದು, ಕವನದ ಒಟ್ಟು ಧಾಟಿಯಲ್ಲಿ ಬರೆಯುವುದಿಲ್ಲ.

---

೧೪)ಯು.ಆರ್.ಅನಂತಮೂರ್ತಿ (ಲಿಲ್ಲಿ ಪುಟ್ಟಿಯ ಹಂಬಲ) ಮುನ್ನುಡಿ

"ದಯವಿಟ್ಟು ಮಿದುಳನ್ನು ಹಿಂತೆಗೆದುಕೊ" ಎಂಬದಕ್ಕಿಂತ ಮುಂಚೆ, ಆದ್ದರಿಂದ ಪ್ರಭೂ ಎನ್ನುವ ಕವಿ ವ್ಯಂಗ್ಯವಾಗಿಯೇ ಆತಂಕಗೊಂಡಿದ್ದಾನೆನಿಸುತ್ತದೆ. ಆದರೆ "ಮನಸ್ಸಿನ ತುಂಬ ಕೆಟ್ಟ ಹುಣ್ಣುಗಳಾಗಿದೆ" ಎಂಬ ನೋವಿನ ನೇರ ಮಾತನ್ನೂ ಆಡುತ್ತಾನೆ. ಈ ಧಾಟಿಯ ವ್ಯತ್ಯಾಸಗಳು ಕವನ ರಚನೆಯಲ್ಲಿರುವ ಮನಸ್ಸು ತನ್ನನ್ನೇ ತಾನು ಎಷ್ಟು ಗಂಭೀರವಾಗಿ ಪರಿಗಣಿಸಿಕೊಳ್ಳಬೇಕು ಎಂಬ ಗೊಂದಲದಿಂದ ಹುಟ್ಟಿದ್ದು ಎನಿಸುತ್ತದೆ. ಆದ್ದರಿಂದ ಪದ್ಯ ಹೇಳುವ ಬಾಧೆಯು ಸ್ವರೂಪವೇನು ತಿಳಿಯುವುದಿಲ್ಲ.

ವಾ-ನರಗೀತೆಯಲ್ಲಿ ಲಕ್ಷ್ಮಣ್‌ರಾವ್, ತನಗೆ ಸಹಜವಾದ ಶಬ್ಧ ಪ್ರಯೋಗದಲ್ಲಿನ ಕ್ರೀಡಾಂಶದ ಜೊತೆ ಚಿಂತನಾಂಶವನ್ನೂ ಬೆಸೆಯಲು ಪ್ರಯತ್ನಿಸಿದ್ದಾರೆ. ಅಚ್ಚುಕಟ್ಟಾದ ಬಂಧದಲ್ಲಿ ನಿರಾಯಾಸವಾಗಿ ಹಾಸ್ಯದಿಂದ ಗಂಭೀರವಾದ್ದಕ್ಕೆ ಏರುವ ಪ್ರಯತ್ನದಲ್ಲಿ ಕವಿ ಯಶಸ್ವಿಯಾಗಿದ್ದಾರೆ.

'ಬೇಲಿ' ಪದ್ಯದಲ್ಲಿ ವಿಚಾರವನ್ನೇ ಇಮೇಜುಗಳ

ಮುಖಾಂತರ ಕಾವ್ಯವಾಗಿಸುವ ಅಡಿಗರ ಧಾಟಿ ನೆನಪಾಗುತ್ತದೆ.

ಮೆಯ್ದುದ್ದು ಅರಗಿ, ರಕ್ತವಾಗಿ ಮಿದುಳ ಮುಟ್ಟಿದರೆ

ಪ್ರಜ್ಞೆ ಮತ್ತಷ್ಟು ಚುರುಕು;

ಅರಗದೆ, ಇತ್ತ ಹೊಟ್ಟೆಯಾ ಕಟ್ಟಿದರೆ

ಮಿದುಳಲ್ಲಿ ಅಣಬೆ ಬೆಳೆಸು

ಹೀಗೆ ಮೂರ್ತ ವಿಚಾರಗಳ ಮುಖಾಂತರ ಅಮೂರ್ತವನ್ನು ಧ್ವನಿಸಬೇಕೆಂದು ಬಯಸುವ ಕವಿ ಎದುರಿಸಬೇಕಾದ ಸಮಸ್ಯೆ ಇದು. ಹಗುರವಾಗಿ ಮಾತಾಡಿದಾಗ ನಮ್ಮ ಮಾತು ಸ್ವಂತದ್ದೆಂದೂ ಸಹಜವೆಂದೂ ನಿರಾಯಾಸವಾಗಿ ಅನಿಸುತ್ತದೆ.

ಆದರೆ ಧಾಟಿ ಧೋರಣೆಗಳು ಗಂಭೀರವಾದಾಗ ನಾವು ಬೇರೆ ಯಾರಂತೆಯೋ ಮಾತಾಡುತ್ತಿದ್ದೇವೆ ಎಂಬ ಅನುಮಾನ ಹುಟ್ಟುತ್ತದೆ. ಸರೀಕರ ಎದುರು ಹಾಗೆ ಮಾತನಾಡುವುದೇ ನಾಚಿಕೆಯೆನಿಸುತ್ತದೆ. ನಮ್ಮ ಸರೀಕರಂತೂ ಹಿರಿಯರಲ್ಲಿ ಗಂಭೀರವನ್ನು ಒಪ್ಪಿದರೂ ತನ್ನ ಸಮಾನರಲ್ಲಿ ಅದನ್ನು ಸುಲಭವಾಗಿ ಒಪ್ಪುವುದಿಲ್ಲ. ಈ ಸಮಸ್ಯೆ ಕಳೆಯದ್ದೂ ಹೌದು ಲಘುವಾದದ್ದು, ಸಹಜವಾಗಿಯೇ ಅಂಕುಡೊಂಕಿನ ಮಾತಿನ ಸೊಗಸಿನದು; ಹೀಗೆ ವಕ್ರವಾಗುವುದಕ್ಕೆ ಇರುವ ಉಪಾಯಗಳು ಹಲವು. ಆದರೆ ಗಂಭೀರವಾದದ್ದು ನೇರ, ಸರಳ ಅದರಲ್ಲೂ ವೈಯಕ್ತಿಕವಾದ ಅನನ್ಯತೆ ಪಡೆಯುವುದು ದುಸ್ಸಾಧ್ಯ. ಶೇಕ್ಸ್‌ಪಿಯರ್‌ನಂತೆ ಹೇಳುವುದು ತುಂಬ ಕಷ್ಟದ ಸಿದ್ಧಿ, ಗಂಭೀರವಾದ ಮಾತಿನ ಅರ್ಹತೆ ಪಡೆಯಲು ಜೀವನದಲ್ಲಿ ಹೇಗೋ ಹಾಗೆಯೇ ಎಲ್ಲರೂ ಯಾವಾಗಲೂ ಹೊಲಗೆಡಿಸುತ್ತಿರುವ ಭಾಷೆಯಲ್ಲೂ ಕವಿ ತಲುಪಬೇಕಾಗುತ್ತದೆ.

'ಲಿಲ್ಲಿಪುಟ್ಟಿಯ ಹಂಬಲದಲ್ಲಿ' ಅಕ್ಕ ಮೀರ ಇತ್ಯಾದಿ ಅನುಭಾವಿಗಳ ಉತ್ಕಟ ದೈವಿಕ ಪ್ರೇಮದಂತೆಯೇ ಗಲಿವರನಿಗಾಗಿ ಲಿಲ್ಲಿಪುಟ್ಟಿಯ ಹಂಬಲ ಮೈತಾಳಿದೆ ಎನ್ನಿಸಿತ್ತು. ಹಾಗೆ ಅನ್ನಿಸುವುದಕ್ಕೆ ಪದ್ಯದಲ್ಲಿ

ನವುರಾದ ಪ್ರೇರಣೆಗಳು ಇದ್ದವು. ಲಕ್ಷ್ಮಣ್‌ರಾವ್‌ಗೆ ವಿಶೇಷದಾದ ಆಸಕ್ತಿಗಳಲ್ಲೊಂದಾದ ಕಾಮ ಇಲ್ಲಿ ಹೊಸ ಆಯಾಮವನ್ನೂ ತೀವ್ರತೆಯನ್ನು ಪಡೆದಿದೆ ಎನ್ನಿಸುತ್ತದೆ. ಯು.ಅರ್.ಅನಂತಮೂರ್ತಿಯವರು ಹೇಳುವಂತೆ ಮತ್ತೆ ಪದ್ಯ ಓದುವಾಗ ಈ ಭಾವನೆ ಜೊತೆ ನನ್ನಲ್ಲೊಂದು ಅತೃಪ್ತಿಯನ್ನು ಮೂಡಿಸುತ್ತದೆ. ಯಾಕೆಂದರೆ ಪದ್ಯದಲ್ಲಿರುವ 'ಲಿಲ್ಲಿಪುಟ್ಟಿಯ' ಆಲಾಪದ ಪ್ರಶ್ನೆಗಳು ಅಸಮರ್ಥ ವಾಕ್ಯಗಳಂತೆ, ವ್ಯಂಜಕ ಶಕ್ತಿ ಇಲ್ಲದವಂತೆ ಕಂಡಿದ್ದು ಇದಕ್ಕೆ ಕಾರಣವೆ?

ಆದರೆ ಲಿಲ್ಲಿ ಪುಟ್ಟಿಯ ಮಾತುಗಳು ಗಟ್ಟಿಯಾಗಿ ಓದಿದಾಗ ತೋರಿಕೆಯ ಆಲಾಪವೆನಿಸುತ್ತದೆ. ಉದಾಹರಣೆಗೆ ಈ ಸಾಲುಗಳನ್ನು ಎಷ್ಟು ಹಾಸ್ಯವಾಗಿ ಓದಬೇಕೆನ್ನುವುದು ನನಗೆ ತಿಳಿಯದು.

ಗಲಿವರ್, ನೀನಿಲ್ಲಿಂದ ಓಡಿ ಹೋಗುವ ಮೊದಲು

ಒಂದೇ ಒಂದು ಬಾರಿಯಾದರೂ ಕಾಡಲಿಲ್ಲವೇ ನನ್ನ ನೆನಪು?

ನಿನ್ನ ಕಣ್ಣ ಗೊಂಬೆಯ ಗೊಂಬೆ ಮಾಸಿ ಹೋಯಿತೆ ಅಷ್ಟು ಬೇಗ?

ಆದರೂ ಇದೊಂದು ಈ ಸಂಕಲನದ ಗಮನಾರ್ಹ ಕವನ

ಇಲ್ಲಿರುವ ಅದಮ್ಯ ಕಾಮ, ಜೀವನದೇವ ಸಂಬಂಧವನ್ನು ಧ್ವನಿಸುತ್ತದೆ.

ಲಕ್ಷ್ಮಣ್‌ರಾವ್ ಬರೆದಿರುವ ಕವನಗಳ ನಡುವೆ "ಸಂವಾದ" ಒಂದು ಅಪೂರ್ವ ಸಿದ್ಧಿ ಎನಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಅಟ್ಲಾಸ್ ಮತ್ತು ಹರ್ಕ್ಯುಲಿಸ್ ಇಬ್ಬರೂ ದುರದೃಷ್ಟರು ಎಂಬುದು ಮಾತ್ರವಲ್ಲ ಈ ಕವಿತೆ ಕೊನೆಯಾಗುವ ಬಗೆ.

ಹಿಂತಿರುಗುತ್ತ ದಾರಿಯಲ್ಲಿ ಅಕಸ್ಮಾತ್ ಕತ್ತೆತ್ತಿದ ಹರ್ಕ್ಯುಲಿಸ್

ಕಿಟಾರನೆ ಚೀರುತ್ತ, ಓಟ ಕಿತ್ತ

ಕುಸಿದ ಛಾವಣಿಯಂತೆ, ಕಲ್ಲ ಚಪ್ಪಡಿಯಂತೆ,

ಇಳಿಯುತ್ತಿತ್ತು ಆಕಾಶ ಭೂಮಿಯತ್ತ

ಅರೆ, ಹೀಗೇಕೆ ಬೆಚ್ಚಿ ಎದ್ದಿರಿ ನೀವು ಭೂಕಂಪವಾದ ಹಾಗೆ?

ಸಿಡಿದಿರಬೇಕು ಯಾವುದೋ ಕ್ಷುದ್ರ ಸಿಡಿಮದ್ದು

ಗಟ್ಟಿಯಿದೆ ನೆಲಗಟ್ಟು ಭದ್ರ ಮೇಲ್ಛಾವಣಿ,

ನಿಶ್ಚಿಂತೆಯಿಂದ ಕೂರಿ, ಕಥೆ ಕೇಳಿ ಮಿಕ್ಕಿದ್ದು

---

೧೫)ಯು.ಆರ್.ಅನಂತಮೂರ್ತಿ (ಲಿಲ್ಲಿ ಪುಟ್ಟಿಯ ಹಂಬಲ) ಮುನ್ನುಡಿ

ಈ ಕವನಕ್ಕೂ ಕೂಡ ನಾನು ಸಭೆಯಲ್ಲಿರುವ ಓದುಗನೇ; ಇಲ್ಲಿರುವ ವಿಚಾರ ಕೂಡ ಪರಿಚಿತವೇ; ಪದ್ಯ ಬರೆಯುವುದು ಕವಿಗೆ ಇನ್ನೂ ಆಟವೇ. ಇಷ್ಟಾದರೂ ಕಟ್ಟುವಿಕೆಯಲ್ಲಿ ಕವಿ ಅನಾಯಾಸವಾದ ಕಲೆಗಾರಿಕೆ ತೋರಿದ್ದಾರೆ. ಗಂಭೀರವಾದ್ದನ್ನು ತನಗೆ ಸಹಜವಾದ ಪದ್ಯ ಕಟ್ಟುವ ಇತಿಮಿತಿಗಳಲ್ಲೇ ಸಾಧಿಸಿದ್ದಾರೆ.

ಲಕ್ಷ್ಮಣ್‌ರಾವ್‌ರವರು ಯು.ಆರ್.ಅನಂತಮೂರ್ತಿಯವರಿಗೆ ಪ್ರಿಯರಾದ ಕವಿಗಳು. ತೋರುಗಾಣಿಕೆಗೆ ನಾಚುವ, ಯೌವನದ ಲವಲವಿಕೆಯುಳ್ಳ, ಚುರುಕಾದ ಸ್ಪಂದನ ಶಕ್ತಿ ಪಡೆದ ಇವರು ಹೊಸ ಮಾತನ್ನು ಹೇಳಬಲ್ಲರೆಂಬ ವಿಶ್ವಾಸವಿರುವುದರಿಂದಲೇ ಅನಂತಮೂರ್ತಿಯವರ ಮಾತಿನಲ್ಲೇ ಮೇಲಿನೆಲ್ಲವನ್ನು ಬರೆಯುವುದು ಸಾಧ್ಯವಾಯಿತು.

ಸುಮಾರು ಒಂದೂವರೆ ದಶಕಗಳ ಹಿಂದೆ ನಾನು ಎಂಬ ಕವಿತೆಯಲ್ಲಿ

ನಾನು ಕ್ರಮವಾಗಿ

ಪಂಚೇದ್ರಿಯ,

ಹೃದಯ,

ಮಿದುಳು.

ಗೆಳೆದಾಸ

ಈ ವ್ಯಾಸ

ದಲ್ಲೇ ನನ್ನ

ಭಾರತ, ಕುರುಕ್ಷೇತ್ರ,

ಕರ್ಮಯೋಗ

ವಿಶ್ವರೂಪ ದರ್ಶನ

ಮುಕ್ತಿ

ಎಂದು ಬರೆಯುತ್ತಾ ಬಹಳ ಸರಳ ಮತ್ತು ಸೀಮಿತ ಆಕಾಂಕ್ಷೆಯೊಂದಿಗೆ ಬಿ.ಆರ್.ಲಕ್ಷ್ಮಣ್‌ರಾವ್ ತಮ್ಮ ಕಾವ್ಯೋದ್ಯೋಗವನ್ನು ಪ್ರಾರಂಭಿಸಿದರು. ಇಂದ್ರಿಯಗಳು ತೆರೆಯುವ ಅನುಭವ ಲೋಕ ಅವನ್ನು ಭಾವಿಸಲು ಹೃದಯ, ಚಿಂತಿಸಲು ಮಿದುಳು– ಇವು ಕವಿಯ ಮೂಲಭೂತ ಅಗತ್ಯಗಳೆಂಬುದು ನಿಜವೇ. ಆದರೆ ಕವಿ ಇಂದ್ರಿಯಗಳ ಗ್ರಹಿಕೆಗಷ್ಟೆ ಜೋತು ಬಿದ್ದರೆ, ಮೂರ್ತ ಸಂಗತಿಗಳಷ್ಟೇ ಅವನು ಮಾತುಕೊಡಬೇಕಾಗುವುದರಿಂದ, ಅವನು ಎದುರಿಸಬೇಕಾಗುವ ಸವಾಲು ಕಡಿಮೆ–ಅಂತೀದ್ರಿಯವಾದ್ದು ಅಮೂರ್ತವೂ ಆದುದ್ದರಿಂದ ಸೃಜನಶೀಲತೆಯ ನೆಲೆಯಲ್ಲಿ ಇಂದ್ರಿಯಗಳ ಚಿಮ್ಮು ಹಲಗೆಯಿಂದ ಅಂತೀದ್ರಿಯಕ್ಕೆ ಚಿಮ್ಮ ಬಯಸುವ ಕವಿ ಎದುರಿಸಬೇಕಾಗುವ ಸವಾಲುಗಳು ಕೂಡ ಘನವಾದವು.

---

೧೬)ಎಚ್.ಎಸ್.ವೆಂಕಟೇಶ್ ಮೂರ್ತಿ (ಕೊಲಂಬಸ್ ಮುನ್ನುಡಿ)

ಈ ಅಂಚಿತ್ಯದ ಸೆಳೆತದೊಂದಿಗೆ ಮೂರ್ತ ಚೆಲುವಿನ ಆಕರ್ಷಣೆಯೂ ಲಕ್ಷ್ಮಣ್‌ರಾವ್‌ರನ್ನು ಮೊದಲಿನಿಂದ ಕಾಡುತ್ತಾ ಬಂದಿದೆ. ಬದುಕನ್ನು ಇಡಿಯಾಗಿ ಅಪ್ಪಕೊಳ್ಳುವುದೆಂದು ಹಿಂದೊಮ್ಮೆ ಅವರು ಪ್ರತಿಜ್ಞೆ ಮಾಡಿದರಷ್ಟೆ; ಆದರೆ ಬದುಕು ಅಷ್ಟು ಸಲೀಸಾಗಿ ತೆಕ್ಕೆಗೆ ಬರುವಂಥದಲ್ಲ. ನಡುವೆ ನೂರಾರು ಅಡ್ಡಗೋಡೆಗಳು ಇಂಥ ತಡೆಗಳು ಕೆಲವು ಹೊರಗಿನವರಾದರೆ ಕೆಲವು ತನ್ನಲ್ಲೇ ಬೆಳೆದು ನಿಂತವು.

ಸೈದ್ಧಾಂತಿಕ ಘರ್ಷಣೆಗಳು, ರಾಜಕೀಯ, ಸಾಮಾಜಿಕ ಯುದ್ಧಗಳು, ಅಕಾಡೆಮಿಯೇ ಮೊದಲಾದ ಸಂಸ್ಥೆಗಳೊಡ್ಡುವ ಆಮಿಷಗಳು, ಹಾಗೂ ಕವಿಗಳನ್ನು ಸಾಮಾನ್ಯವಾಗಿ ಬಾಧಿಸುವ ಪ್ರಸಿದ್ಧಿಯ ಆಸೆಗಳು. ಇವೆಲ್ಲದರ ಮಧ್ಯೆ ಕಲೆಗಾರಿಕೆಯನ್ನು ದೀರ್ಘಕಾಲ ಪ್ರಕಾಶಮಾನವಾಗಿ ಬೆಳೆಸಿಕೊಂಡು ಹೋಗುವುದು ಸುಲಭವೇನಲ್ಲ. ಬರೆಯಲು ತೊಡಗಿದಾಗಲೇ ಪೋಲಿ ಪದ್ಯಗಳ ಕರ್ತಾರನೆಂದು ಬಂದ ಬಿರುದನ್ನೂ, ಸಂಡೇ ಕವಿ ವರ್ಗಕ್ಕೆ ಸೇರಿದವನೆಂಬ ಅವಹೇಳನವನ್ನೂ ಮೀರಿ, ಹಾಗೆಯೇ ನಂತರ ನವ್ಯದ 'ಇಳಿಗಾಲ'ದಲ್ಲಿ ನಡೆದ ಬಹಿಷ್ಕಾರವನ್ನೂ ಕಡೆಗಣಿಸಿ ಲಕ್ಷ್ಮಣ್‌ರಾವ್ ಬೆಳೆದಿದ್ದಾರೆ. ಆದರೂ ಚಾರಿತ್ರಿಕವಾಗಿ ನೋಡಿದರೆ, ಕವಿಯ ಎಚ್ಚರವನ್ನು ಕಾಪಾಡುವ ಸಾಮಾಜಿಕ ಚಳುವಳಿಗಳಿಂದಾಗಲೀ, ಸಾಹಿತ್ಯವನ್ನು ಆದರ್ಶ ಸ್ಥಿತಿಯ ಕಡೆಗೆ ಮುನ್ನೊತ್ತುವ ವಿಮರ್ಶೆಯಿಂದಾಗಲೀ ಅವರು ವಿಮುಖರಾಗಿಲ್ಲವೆಂಬುದಕ್ಕೆ ಈ ಸಂಕಲನದಲ್ಲಿ ಅದೆಷ್ಟೋ ಉದಾಹರಣೆಗಳು ದೊರೆಯುತ್ತವೆ. ಸುತ್ತಣ ಜೀವನದ ಪ್ರವಾಹದಿಂದ ತಪ್ಪಿಸಿಕೊಳ್ಳದೆ, ಅದರಲ್ಲಿ ಕೊಚ್ಚಿಯೂ ಹೋಗದೆ ಆ ಪ್ರವಾಹವನ್ನು ತನ್ನ ನಾಡಿಗಳಲ್ಲಿ ಒಳಗೊಂಡು ಪದ್ಯ ರಚನೆ ಮಾಡುವುದು ಬೆಳವಣಿಗೆಯ ಒಂದು ಬಹುಶಃ ಒಂದೇ ಒಂದು ವಿಧಾನ ಕಳೆದೆರಡು ದಶಕಗಳಲ್ಲಿ ಲಕ್ಷ್ಮಣ್‌ರಾವ್ ಇಂಥ ಬೆಳವಣಿಗೆಯನ್ನು ತೋರಿಸಿದ್ದಾರೆ.

ಬೇಂದ್ರೆ, ಅಡಿಗ, ರಾಮಾನುಜನ್‌ರಂಥ ಭಿನ್ನ ಕಾವ್ಯ ಪ್ರಕೃತಿಯ ಶಕ್ತಶಾಲೀ ಕವಿಗಳ ಪ್ರಭಾವವನ್ನು ಜೀರ್ಣಿಸಿಕೊಂಡು ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಬಂದುದು ಲಕ್ಷ್ಮಣ್‌ರಾವ್ ಅವರ ಪ್ರಮುಖ ಸಾಧನೆಯಾಗಿದೆ. ಬೇಂದ್ರೆಯವರ ಆಧ್ಯಾತ್ಮಿಕತೆ, ಅಡಿಗರ ದುರಂತ ಪ್ರಜ್ಞೆ, ರಾಮಾನುಜನ್‌ರ ನಿರ್ಲಿಪ್ತತೆ. ಇವು ಲಕ್ಷ್ಮಣ್‌ರಾವ್ ಅವರ ಕಾವ್ಯ ಪ್ರಕೃತಿಗೆ ಒಗ್ಗದ ಗುಣಗಳು. ಈ ಗುಣಗಳನ್ನು ಮೆಚ್ಚಿಯೂ ಅವರು ತಮ್ಮ ಮುಕ್ತತೆಯನ್ನು ರಕ್ಷಿಸಿಕೊಂಡು ಬಂದಿದ್ದಾರೆ.

ಬೇಂದ್ರೆ, ಅಡಿಗ, ರಾಮಾನುಜನ್‌ರನ್ನು ಉದಾಹರಣೆಗೆ ಮಾತ್ರ ತೆಗೆದುಕೊಳ್ಳಬಹುದು. ಹಾಗೆ ನೋಡಿದರೆ ಲಕ್ಷ್ಮಣ್‌ರಾವ್ ಅವರು ತಮ್ಮನ್ನು ವಿದೇಶಿಯರೂ ಸೇರಿದಂತೆ ಬೇರೆ ಬೇರೆ ಕವಿಗಳ ಪ್ರಭಾವಕ್ಕೆ ಒಡ್ಡಿಕೊಳ್ಳುತ್ತಲೇ ಬಂದಿದ್ದಾರೆ. ಅವರ ಎಲ್ಲಾ ಸಂಗ್ರಹಗಳಲ್ಲಿಯೂ ಅನುವಾದಗಳಿರುವುದು ಕಾವ್ಯದ ಬಗ್ಗೆ ಅವರಿಗಿರುವ ಆರೋಗ್ಯಕರ ಹಸಿವಿನ ಲಕ್ಷಣವಾಗಿದೆ. ಮೂಲತಃ ಕಾಮಪ್ರಕೃತಿಯವರಾದ ಲಕ್ಷ್ಮಣ್‌ರಾವ್ ಅವರ ಹಲವಾರು ಕವಿತೆಗಳ ವಿಷಯ ಕಾಮವೇ ಆಗಿರುವುದು ಆಶ್ಚರ್ಯ ಹುಟ್ಟಿಸುವುದಿಲ್ಲ. "ಹೆಣ್ಣಿನ ಬಗ್ಗೆ ನನಗೆ ಸದಾ ಆಸೆಯ ನಿಬ್ಬೆರಗು ಕಣ್ಣು" ಎಂದು ಅವರೇ ಈ ಸತ್ಯವನ್ನು ಒಪ್ಪಿಕೊಂಡಿದ್ದಾರೆ. ಆದರೆ ಪದ್ಯದ ದೃಷ್ಟಿಯಿಂದ ಕಾಮವೊಂದನ್ನೇ ಅವಲಂಬಿಸಿದರೆ ಪಶ್ಚಾತ್ತಾಪ ಪಡಬೇಕಾದೀತು ಎಂಬ ಲಂಕೇಶರ ಎಚ್ಚರಿಕೆಯ ಮಾತನ್ನೂ ಅವರು ಮರೆತಿಲ್ಲ. ಹೆಣ್ಣಿನ ಬಗ್ಗೆ ಅವರು ಕಂಡ ಸ್ವಪ್ನಗಳಲ್ಲಿ ಕೆಲವಾದರೂ ದುಃಸ್ವಪ್ನಗಳಾಗಿ ಪರಿಣಮಿಸಿದ್ದುಂಟು.

---

೧೭)ಕೆ.ವಿ.ತಿರುಮಲೇಶ್ (ಕೊಲಂಬಸ್ ಬೆನ್ನುಡಿ)

ನಡು ಬೀದಿಯಲ್ಲಿ

ಬಿಂದು ಹೆಣ್ಣಿನ ಹೆಣ ಅಂಗಾತ

ಚೆಲ್ಲಿ ಬಿದ್ದಿತ್ತು,

ಮೊಂಡು ಕೈಗಳ

ಬಿಕನಾನಿ

ಗಬ್ಬುನಾರುವ ಹೆಣ

ಬಹುಶಃ ಇದಕ್ಕಾಗಿಯೇ ಇರಬಹುದು. ಅವರ ಹೊಸ ಸಂಗ್ರಹದ ಬಹಳಷ್ಟು ಕವಿತೆಗಳು ಕಾಮಕೇಂದ್ರೀತವಾಗಿಲ್ಲ. ಕಾವ್ಯದ ಸ್ವರೂಪ. ಕಾಲದ ರಹಸ್ಯ. ಸೋಲಿನ ಅನುಭವ ನಾಗರೀಕತೆಯ ದುರಂತಗಳು. ಸಾಮಾನ್ಯ ಜೀವನದ ಅದ್ಭುತಗಳು ಹೀಗೆ ಸೀಮಿತ ವಲಯದ ಆಚೆಗಿನ ವಸ್ತುಗಳನ್ನೂ ಒಳಗೊಳ್ಳಲು ಅವರ ಕಾವ್ಯ ಹೊಂಚುಹಾಕಿದೆ. ಹಾಗೂ ಭರವಸೆ ಹುಟ್ಟಿಸುವ ಯಶಸ್ಸನ್ನು ಸಾಧಿಸಿದೆ.

ಕಾವ್ಯ ಸಿದ್ಧಾಂತಗಳ ಬಗ್ಗೆ ಲಕ್ಷ್ಮಣ್‌ರಾವ್ ತಲೆಕೆಡಿಸಿಕೊಂಡವರಲ್ಲ. ಆದರೆ ಹೊಸ ಸಂಗ್ರಹದ 'ಅಂತರ್ಜಲ'ದಂಥ ಕವಿತೆಗಳಲ್ಲಿ ಕಾವ್ಯದ ಸ್ವರೂಪದ ಬಗ್ಗೆ ಅವರಿಗೆ ಹೊಸದಾಗಿ ದೊರಕಿದ ಒಳನೋಟಗಳನ್ನು ಗುರುತಿಸಬಹುದು. ಇಲ್ಲಿಯೂ ಕೂಡ ಅವರ ವಾಸ್ತವಪ್ರಜ್ಞೆ ಜಾಗೃತವಾಗಿಯೇ ಇದೆ ಸ್ಫೂರ್ತಿಯಿಲ್ಲದೆ ಕಾವ್ಯವಿಲ್ಲ ಎನ್ನುವುದು ನಿಜವಿದ್ದಂತೆ ಸ್ಫೂರ್ತಿಯನ್ನೇ ನೆಚ್ಚಿದರೆ ಕಾವ್ಯವಿಲ್ಲ ಎನ್ನುವುದೂ 'ಮಳೆಯನ್ನೇ ನೆಚ್ಚಿದರೆ ವ್ಯವಸಾಯವೇ ಇಲ್ಲ ಎನ್ನುವಷ್ಟೇ ನಿಜ. ಇಡೀ ಕವಿತೆಯಲ್ಲಿ ಮಳೆ, ವ್ಯವಸಾಯಗಳ ಸಂಬಂಧ ಸ್ಫೂರ್ತಿ ಕಾವ್ಯೋದ್ಯೋಗಗಳ ಸಂಬಂಧದ ರೂಪಕವಾಗಿ ಬೆಳೆಯುವ ರೀತಿ ಅನಾದೃಶ್ಯವಾಗಿದೆ. ಸ್ಫೂರ್ತಿ ಎಷ್ಟಾದರೂ ಮಳೆಯಂತೆ ಹೊರಗಿನಿಂದ ಬರುವುದಾದರಿಂದ ಅಂತರ್ಜಲವನ್ನೇ ನಂಬುವುದು ಕವಿಗೆ ಅನಿವಾರ್ಯ ತನ್ನ ವ್ಯವಸಾಯವನ್ನು ನಿರಂತರವಾಗಿ ಸಾಗಿಸಿಕೊಂಡು ಹೋಗುವ ಸಾಧ್ಯತೆಗಳು ಅತ್ಯಂತ ಸೀಮಿತವಾದರೂ ಕವಿ ಅಷ್ಟರಲ್ಲಿಯೇ ತೃಪ್ತಿಪಟ್ಟುಕೊಳ್ಳಬೇಕು. ತನ್ನ ಅಂತಃಶಕ್ತಿಯನ್ನೇ ದುಡಿಸಿಕೊಳ್ಳಬೇಕು. ಎನ್ನುವ ವ್ಯವಹಾರಿಕ ಅರಿವು ಕವಿತೆಯ ಧ್ವನಿಯಲ್ಲಿದೆ. 'ಎದೆ ಹೊಲದ ಪ್ರಯೋಗ ಬೇಂದ್ರೆಯವರ ಎದೆಯ' ಒಕ್ಕಲಿಗನನ್ನು ನೆನಪಿಗೆ ತಂದುಕೊಡುವ ಮೂಲಕ ಲಕ್ಷ್ಮಣ್‌ರಾವ್ ಅವರ ಕಾವ್ಯ ಚಿಂತನವನ್ನು ಪರಂಪರೆಗೆ ಜೋಡಿಸುತ್ತದೆ.

ಎಂಥ ಕವಿಗೂ ಸೋಲಿನ ಭಯ ತಪ್ಪಿದ್ದಲ್ಲ. ಆದರೆ ಅದನ್ನು ಎದುರಿಸಿ ಆತ ತನ್ನ ಕಾವ್ಯೋದ್ಯೋಗವನ್ನು ನಡೆಸಿಕೊಂಡು ಹೋಗಬೇಕಾಗುತ್ತದೆ.

---

೧೮)ಜಿ.ಎಸ್.ಆಮೂರ ಅಪರಾಧಗಳ ಮನ್ನಿಸೊ (ಮುನ್ನುಡಿ)

ಲಕ್ಷ್ಮಣ್‌ರಾವ್ ಶೋಧಿಸುವ ರಹಸ್ಯಗಳೆಲ್ಲ, ಸಾಮಾನ್ಯ ಜೀವನದ ರಹಸ್ಯಗಳೇ ಅವರ ಪ್ರಪಂಚವೇ 'ಅಪೂರರದು'. ಹೀಗೆ ಸೋಲು ಸಹಜವಾಗಿಯೇ ಅವರ ಆಸ್ಥೇಯ ವಿಷಯವಾಗುತ್ತದೆ. ಸೋಲು 'ಸೆಮಿಫೈನಲ್ ಉದ್ಗಾರಗಳು' ಕವಿತೆಯಲ್ಲಿದ್ದಂತೆ ಕ್ರಿಕೆಟಿನಲ್ಲಾಗಿರಬಹುದು. ಅಥವಾ 'ಪ್ರಾಪ್ತಿ'ಯಲ್ಲಿದ್ದಂತೆ ಪ್ರೀತಿಯ ಸಂಬಂಧಗಳಲ್ಲಿರಬಹುದು. ಆದರೆ ಅದರ ಸ್ವರೂಪ ಒಂದೇ ತೆರನಾದದ್ದು.

ನನಗೆ ಲಭ್ಯವಿಲ್ಲ

ನಿನ್ನ ಪ್ರೇಮಾಮೃತದ ಗಿಂಡಿ

ಪ್ರಾಪ್ತಿ ಇಷ್ಟೇ ನನಗೆ

ನನ್ನ ಮಗನಿಗೆ

ಒಂದು ಮಣ್ಣಿನ ಬಂಡಿ.

ಇದು ಅವರ ಅಪೂರ ಚಾರುದತ್ತ ತನ್ನ ಪ್ರಿಯತಮೆಗೆ ಹೇಳುವ ಮಾತು. ಎಲ್ಲ ಹೀರೋಗಳಿಗೂ ಒಂದೇ ಗತಿ ೦೦೭ನ ಗತಿಯಂತೆ: ಸೊನ್ನೆ

ನನ್ನ ಹೀರೋ ಇಂದು ನಿತ್ರಾಣಿ ಮುದಿಬುದ್ಧ.

ಆದರೆ, ಈ ಸಾಲುಗಳನ್ನು ಮೀರಿಯೂ ಸಾಮಾನ್ಯ ಜೀವನದಲ್ಲಿ 'ಅದ್ಭುತ'ಗಳು ಜರುಗುತ್ತಲೇ ಇರುತ್ತವೆ. ಆಸ್ತಿಪಾಸ್ತಿಗಳಿಲ್ಲದ, ಚೆಲುವೆಯಾಗಿರದ ಹುಡುಗಿಯನ್ನು ಒಬ್ಬ ಪ್ರೀತಿಸಿ ಕೈ ಹಿಡಿಯುತ್ತಾನೆ. ಮಾತು ಮಾತಿಗೂ ಹಂಗಿಸುವ ನೆರೆಮನೆಯ ಹೆಂಗಸು ಅಕ್ಕನಂತೆ ಆಸ್ಪತ್ರೆಗೆ ಓಡಾಡುತ್ತಾಳೆ; ಹೆಂಡತಿ ತಾರುಣ್ಯವನ್ನು ಕಳೆದುಕೊಂಡರೂ ಗಂಡನ ಮುಖದಲ್ಲಿ ಮುಗುಳ್ನಗೆ ಅಳಿಯುವುದಿಲ್ಲ. ಗಂಡ, ಮಕ್ಕಳು ಫ್ಯಾಕ್ಟರಿ, ಶಾಲೆಗಳಿಂದ ಸುರಕ್ಷಿತ ಮನೆಗೆ ಮರಳುತ್ತಾರೆ.

ಬಿರುಗಾಳಿಯಲ್ಲಿಯೂ ಪುಟ್ಟ ಮನೆಯ ತಗಡಿನ ಸೂರು ನಿಂತೇ ಇರುತ್ತದೆ. ಈ 'ಅದ್ಭುತ'ಗಳನ್ನು ಅತ್ಯಂತ ಜಾಗರೂಕತೆಯಿಂದ ಲಕ್ಷ್ಮಣ್‌ರಾವ್ ದಾಖಲಿಸುತ್ತಾರೆ. ಸಾಲ್‌ಬೆಲ್ಲೋ ಹೇಳಿದಂತೆ ರಹಸ್ಯಗಳನ್ನು ನಾವು ಹುಡುಕಿಕೊಂಡು ಹೋಗಬೇಕಾಗಿಲ್ಲ. ಅವು ನಮ್ಮ ಸಾಮಾನ್ಯ ಜೀವನದಲ್ಲಿಯೇ ಅಡಗಿರುತ್ತದೆ.

ಮನುಷ್ಯನ ಅಸ್ತಿತ್ವವೇ ಕಾಲವನ್ನವಲಂಬಿಸಿದಾಗ ಕಾಲದ ಸವಾಲನ್ನು ಎದುರಿಸದ ಕವಿಯೇ ಇರಲಾರ.

ದೇವರ ಮರೆತರೂ ಈತ ಮರೆಯೋದುಂಟೆ?

ಗಂಟೆ ಒಡಿಯುತ್ತಾನೆ

ಕನ್ನಡಿ ಹಿಡಿಯುತ್ತಾನೆ

ಕಾಡುತ್ತಾನೆ ಬೆನ್ನು ಹತ್ತಿ ಬೇತಾಳ

ಈ ಸಂಗ್ರಹದಲ್ಲಿ ಕಾಲವನ್ನೇ ವಸ್ತುವಾಗಿರಿಸಿಕೊಂಡು ನಾಲ್ಕಾರು ಕವಿತೆಗಳಿವೆ. ಈ ಎಲ್ಲ ಕವಿತೆಗಳ ಆಶಯ ಕಾಲದ ಪ್ರಾಬಲ್ಯ ಮತ್ತು ಅದನ್ನು ಮೀರುವ ಸಾಧ್ಯತೆಗಳು; ಕಾಲಯಂತ್ರದಲ್ಲಿ ಈ ಸಾಧ್ಯತೆಗಳನ್ನು

ಕವಿ ರತ್ಯಾನುಭವದಲ್ಲಿ ಕಂಡರೆ (ಕೆಲವೊಂದು) ಕವಿಗಳಿಗೆ ಈ ಅನುಭವ ಸಾವಿನ ಸಂಕೇತವಾಗಿಯೂ ಕಂಡಿದೆ. ಕಾಲದಲ್ಲಿ ರೂಢಿಯ ಧಿಕ್ಕಾರದಲ್ಲಿ, ಹೊಸ ಶೈಲಿಗಳ ಸೃಷ್ಟಿಯಲ್ಲಿ ಅವುಗಳನ್ನು ಕಾಣುತ್ತಾನೆ. ಆದರೆ ಅಡಿಗರಂತೆ ಭವಿಷ್ಯದ ಬಗ್ಗೆ ಏಕಾಗ್ರತೆಯಿಂದ ಚಿಂತಿಸುವುದು ಲಕ್ಷ್ಮಣ್‌ರಾವ್ ಅವರಿಗೆ ಸಾಧ್ಯವಾಗುವುದಿಲ್ಲ. ಯಾಕೆಂದರೆ ವರ್ತಮಾನವನ್ನು ಅವರೆಂದೂ ಮರೆಯಲಾರರು.

ಹುತ್ತಗಟ್ಟಿದ ಚಿತ್ತ ಹಾರೈಸಿ ಕಲ್ಪಿಸುತ್ತೆ

ಪುರುಷೋತ್ತಮನ ರೂಪರೇಖೆ;

ತುಂಬು ಗರ್ಭಿಣಿ ಕೊನೆಗೆ ಕವಿಯನ್ನೇ ಕೇಳುತ್ತಾಳೆ

'ಅಯ್ಯೋ ಹೀಗಾಯಿತೇಕೆ?'

ಹೀಗಾಗಿ ಕಾಲದ ಬಗ್ಗೆ ಅವರ ಪ್ರತಿಮೆಗಳೆಲ್ಲ ಭಗ್ನ ಪ್ರತಿಮೆಗಳಾಗಿಯೇ ಉಳಿಯುತ್ತದೆ. ಯಾವುದೇ ವಸ್ತುವಿನ ಅಥವಾ ಅನುಭವದ ಆಳಕ್ಕಿಳಿಯುವುದಕ್ಕಿಂತ ಅದರ ಮಿತಿಗಳನ್ನು ಗುರುತಿಸುವುದರಲ್ಲಿಯೇ ಈ ಕವಿಯ ಪ್ರತಿಭೆ ದುಡಿಯುತ್ತದೆ. ಇಂಥ ಬೌದ್ಧಿಕ ಕ್ರಿಯೆಗೆ ಅವಶ್ಯವಿರುವ ಪ್ರಾಮಾಣಿಕತೆ, ತೀಕ್ಷ್ಣತೆ ಮತ್ತು ಹೊಸ ದೃಷ್ಟಿ ಅವರ ಕಾವ್ಯದ ಮುಖ್ಯ ಗುಣಗಳು. ಶಾಂಗ್ರಿ–ಲಾದ ಬಗ್ಗೆ ಆಮೂರರು ಹೇಳಿದ ಈ ಮಾತು ಲಕ್ಷ್ಮಣ್‌ರಾವ್ ಅವರ ಕಾವ್ಯ ವ್ಯಕ್ತಿತ್ವಕ್ಕೂ ಅನ್ವಯಿಸುತ್ತದೆ.

ಈ ನೆಲದ ಮೇಲೆ ಭದ್ರ ಕಾಲೂರಿ ನಡೆಯೋಣ ಹಿಡಿದು ಹಿತಮಿತವಾದ ಹಾದಿ;

ಜಿಗಿದು ನಿರ್ವಾತಕ್ಕೆ ಪ್ರೇತಗಳಂತೆ ಅಲೆದಾಟ ಬೇಡ

ಈ ಭುವಿಯ ಅಂಕೆ ಮೀರಿ.

ಆದರೆ, ನಾನು ನೆಲದಿಂದ ಬಹಳ ಎತ್ತರಕ್ಕೆ ಏರಿದವನೇ ಅಲ್ಲ ಎಂದು ಹೇಳಿದ ಬೇಂದ್ರೆಯವರು ಹದಿನಾಲ್ಕು ಲೋಕಗಳನ್ನು ಹುಡುಕಿಕೊಂಡು ಹೊರಟಂತೆ, ಲಕ್ಷ್ಮಣ್‌ರಾವ್ ಕೂಡ ತಮ್ಮ ಪರಿಧಿಯನ್ನು ಉಲ್ಲಂಘಿಸಿ ಪ್ರಯಾಣ ಬೆಳೆಸಿದ್ದುಂಟು. ಈ ಪ್ರಯಾಣಕ್ಕಾಗಿ ಅವರು ಬಳಸಿದ ವಿಧಾನ ಮಾತ್ರ. ಬೇಂದ್ರೆಯವರದಲ್ಲ ಅಮಿತಾವ್ ಘೋಷರ ಪರಿಭಾಷೆಯಲ್ಲಿ ಹೇಳುವುದಾದರೆ ಅದು ಒಂದು ರೀತಿಯ ಪರಾತ್ಮ ಪ್ರವೇಶ. ಇದಕ್ಕಾಗಿಯೇ ಅವರು ಮೊದಲಿನಿಂದಲೂ ತಮ್ಮ ವ್ಯಕ್ತಿತ್ವಕ್ಕಿಂತ ಭಿನ್ನ ವ್ಯಕ್ತಿತ್ವಗಳನ್ನು ಸಾಕ್ಷಾತ್ಕರಿಸಿಕೊಳ್ಳಲು ಪ್ರಯತ್ನಿಸಿದ್ದುಂಟು.

ಸಿಂದಬಾದ್ ಕೊಲಂಬಸ್, ಲಿಲ್ಲಿಪುಟ್ಟಿ, ಅಟ್ಲಾಸ್ ಹರ್ಕ್ಯುಲಸ್ ಅಥವಾ ಈ ಸಂಗ್ರಹದ ರಿಪ್ ವ್ಯಾನ್ ವಿಂಕಲ್ ಇಂಥ ವ್ಯಕ್ತಿತ್ವಗಳು ಈ ವಿಧಾನ ಅವರಿಗೆ ತಮ್ಮ ಸ್ವಂತದ ಅನುಭವದ ಕ್ಷಿತಿಜಗಳನ್ನು ಮೀರಿದ ಸತ್ಯಗಳನ್ನು ಕಂಡುಕೊಳ್ಳಲು ಅವಕಾಶಗಳನ್ನು ಕಲ್ಪಿಸಿಕೊಡುತ್ತದೆ.

---

೧೯)ಜಿ.ಎಸ್.ಆಮೂರ ಅಪರಾಧಗಳ ಮನ್ನಿಸೊ (ಮುನ್ನುಡಿ)

ತೊರೆದು ಬರಲೆ ಭವ ಬಂಧ

ನಿನ್ನ ದಿವ್ಯಾನುಭವಕ್ಕಾಗಿ?

ಕುಬ್ಜ ಕಲ್ಪನೆಗೆ ಮೀರಿದ ಲೋಕದ

ಭವ್ಯ ಅರಿವಿಗಾಗಿ?

ಎಂದು ಒರಲುವ ಲಿಲ್ಲಿಪುಟ್ಟಿಯ ಹಂಬಲವಾಗಲಿ

ಎಲ್ಲಿ? ಎಲ್ಲಿ ಆ ಹೊಸ ಧರಿತ್ರಿ?

ಪ್ರಭೂ ಬೀಜವೃಕ್ಷ ಒಗಟಿನಂತೆ

ನನ್ನ ನಿನ್ನ ಇರುವು

ನಾನಿಲ್ಲದೆ ನೀನೂ ಇಲ್ಲ,

ನೀಡು ನಿನ್ನ ಸುಳಿವು

ಎಂದು ಬೇಡುವ ಭಕ್ತನ ಆಧ್ಯಾತ್ಮಿಕ ಕರೆಯಾಗಲಿ ಲಕ್ಷ್ಮಣರಾವ್ ಅವರ ಕಾವ್ಯ ವ್ಯಕ್ತಿತ್ವಕ್ಕೆ ಹೊರಗಿನವುಗಳು. ಆದರೂ ಅವರು ತಮ್ಮ ಕವಿತೆಗಳಲ್ಲಿ ನಿಜಗೊಳಿಸಿದ್ದಾರೆ. ಚಿರಂತನ ಸತ್ಯಗಳ ಚಿಂತನೆಯಂತೆ ಇದು ಕೂಡ ಮೀರುವ ಕ್ರಿಯೆಯೇ.

ಸಾಕ್ಷಾತ್ಕರಿಸುವುದು ಇವತ್ತಿನಲ್ಲಿ ಮತ್ತು ಮನುಷ್ಯನ ಇಂದಿನ ಬದುಕಿನ ನೆಲೆಯಲ್ಲಿ ಲಕ್ಷ್ಮಣರಾವ್ ಕಟ್ಟುವ ಪ್ರತಿಮಾ ಸೌಧ ವರ್ತಮಾನದ ಬುನಾದಿಯ ಮೇಲೆ, ವರ್ತಮಾನದ ಆವರಣದೊಳಗೆ ಮೂಡಿ ನಿಲ್ಲುವುದಾಗಿದೆ.

ಮೊದಲ ರೀತಿ ಪರಂಪರೆಯ ಹಂಗಿಲ್ಲದ, ವರ್ತಮಾನದ ಜಡಿತ್ವವನ್ನು ನೀಡುತ್ತದೆ. ಕೊನೆಯ ಭಾಗದ ಕವಿತೆಗಳು (ಉದಾ-ಭ್ರಮೆ) ಇಂಥ ರೀತಿಯಿಂದ ಭಿನ್ನವಾಗಲು ಉಪಕ್ರಮಿಸುವುದನ್ನೂ ನೋಡಬಹುದು. ಲಕ್ಷ್ಮಣರಾವ್ ಕಾವ್ಯದ ಸೊಗಸು ಇರುವುದು ಅದರ ಜೀವಂತಿಕೆಯಲ್ಲಿ ಅದರ ಚಿರಯೌವನದಲ್ಲಿ ಕವಿಗೆ ವಯಸ್ಸಾದರೂ ಅವನ ಕಾವ್ಯಕ್ಕೆ ಮುಪ್ಪು ತಗುಲಬೇಕಿಲ್ಲ. ಇಡೀ ಸಂಕಲನದ ಎಲ್ಲಾ ಕವಿತೆಗಳೂ ಜೀವಂತಿಕೆಯಿಂದ ಮಿಡಿಯುತ್ತಿದ್ದು ಅವು ತಮ್ಮ ತಮ್ಮ ವೈಯಕ್ತಿಕ ವಯೋಮಾನವನ್ನು ಬಿಂಬಿಸುತ್ತ ಆಯಾ ವಯೋಮಾನಕ್ಕೆ ತಕ್ಕುದಾದ ಮುಗ್ಧತೆ ಮತ್ತು ಶಿಳುವಳಿಕೆಗಳನ್ನು ಬಿಂಬಿಸುತ್ತವೆ. ಅಂತಲೇ ಈ ಕವಿತೆಗಳ ಓದು ನಮ್ಮನ್ನು ಅವುಗಳ ಮುಗ್ಧತೆ ಶಿಳುವಳಿಕೆಗಳ ಸ್ನಿಗ್ಧತೆಯಲ್ಲಿ ಅದ್ದುತ್ತವೆ. ನಮ್ಮ ಕಾವ್ಯ ಸಂವೇದನೆಯ ಜೀವಂತಿಕೆಯನ್ನು ವರ್ಧಿಸುತ್ತವೆ.

---

೨೦) ರಾಘವೇಂದ್ರ ಪಾಟೀಲ "ಇವಳು ನದಿಯಲ್ಲ" (ಮುನ್ನುಡಿ)

'ಅಪರಾಧಂಗಳ ಮನ್ನಿಸೊ' ಎಂದು ದಾಸರು ಹಾಡಿದಾಗ ಅವರು ಯಾರಲ್ಲಿ ಪ್ರಾರ್ಥಿಸುತ್ತಿದ್ದರು ಎನ್ನುವುದು ಸ್ಪಷ್ಟವಾಗಿತ್ತು. ಆದರೆ ಲಕ್ಷ್ಮಣರಾವ್ ಅವರ ಮನವಿ ಯಾರನ್ನುದ್ದೇಶಿಸಿದ್ದು ಎನ್ನುವುದು ಕೇವಲ ಊಹೆಯ ವಿಷಯ. ಬಹುಶಃ ಕಾವ್ಯದ ಹಸಿವಿಲ್ಲದ ಅಕೆಡೆಮಿಕ್ ವಿಮರ್ಶಕರನ್ನು ಕುರಿತು ಈ ವ್ಯಂಗ್ಯದ ಮಾತನ್ನು ಅವರು ಹೇಳಿರಬಹುದು. ಆದರೆ ಅದೇ ಜಾತಿಗೆ ಸೇರಿದ ಆಮೂರರು ಹೇಳುವಂತೆ ಅವರೂ ಒಂದಾನೊಂದು ಕಾಲದಲ್ಲಿ ಕನ್ನಡ-ಇಂಗ್ಲೀಷ್‌ಗಳೆರಡಲ್ಲೂ ಕವಿತೆ ಬರೆದುದು ಲಕ್ಷ್ಮಣ್‌ರಾವ್‌ರವರಿಗೆ ತಿಳಿದಿರಲು ಸಾಧ್ಯವಿಲ್ಲ!

ಲಕ್ಷ್ಮಣರಾವ್ ಅವರ ಕಾವ್ಯವು ಇನ್ನೊಂದು ರೀತಿಯಿಂದಲೂ ಸಂವಹನದ ಸುಭಗತೆಯನ್ನು ಸಾಧಿಸುತ್ತದೆ. ಹಾಗೆ ನೋಡಿದರೆ ಈ ರೀತಿಯೇ ಲಕ್ಷ್ಮಣರಾವ್ ಕಾವ್ಯದ ಪ್ರಧಾನ ರೀತಿ. ಮಧ್ಯಮ ವರ್ಗದ ಜೀವನಧಾರೆಯ ಅನುಭವ ದ್ರವ್ಯವನ್ನು ವರ್ತಮಾನದ ವಾಸ್ತವವನ್ನು ವಸ್ತುವನ್ನಾಗಿ ಸ್ವೀಕರಿಸುವುದರ ಮೂಲಕ ಸಾಧ್ಯವಾಗುವ ರೀತಿ ಇದು. ಇದರ ಕಾವ್ಯ ಮಧ್ಯಮ ವರ್ಗದ ಜೀವನ ದೃಷ್ಟಿಕೋನವನ್ನು ಮತ್ತು ತಾತ್ವಿಕತೆಯನ್ನು ಕಟ್ಟಿಕೊಡುವುದನ್ನು ನೋಡಬಹುದು. ಅವರ ಹಿಂದಿನ ಸಂಕಲನಗಳಲ್ಲಿ ಬಿಂಬಿತವಾಗುವ ಈ ದೃಷ್ಟಿಕೋನಕ್ಕೆ ಒಂದಿಷ್ಟು ಉದಾಹರಣೆಗಳನ್ನು ಕೊಡಬಹುದು.

ನಡುವೆ ನಾನಿದ್ದೇನೆ ಭದ್ರವಾಗಿ, ಬಿಡುಗಣ್ಣಾಗಿ

ಇಕ್ಕಟ್ಟಾದರೇನಂತೆ ಕೊಂಚ?

ಕಿಟಕಿ ಬಡಿಯುವುದಿಲ್ಲ, ಜೋಲಿ ತಪ್ಪುವುದಿಲ್ಲ,

ಎರಡೂ ಕಡೆಗಿದೆ ಆಧಾರ

(ಮಧ್ಯಸ್ಥ ಪುಟ ೧೪೯)

ಜೀವನದ ಅಲೆಗಳ ಏರು ತಗ್ಗುಗಳ ರಭಸ ಸಂಘರ್ಷಗಳನ್ನು ಒಲ್ಲದೆ ಸಮಕಟ್ಟಾದ ನಿರಾಳದ ಹರಿವನ್ನು ಈ ಕಾವ್ಯ ಅಪ್ಪಿಕೊಳ್ಳುತ್ತದೆ. ಕಾವ್ಯ ಕನ್ನಿಕೆಯಾದ ದಮಯಂತಿ ದೇವತೆಗಳ ನೆರವಿನೊಳಗೆ ಸೇರಿಕೊಂಡಿರುವ ನರಮನುಷ್ಯ ನಳನನ್ನೇ ಬಯಸುತ್ತಾಳೆ.

ಇನ್ನು ನಿನ್ನ ನಿಜವಾದ ನಳನನ್ನು

ನರನನ್ನು

ಪ್ರಿಯಕರನನ್ನು

ಬಾ ಗುರುತಿಸು

ವರಿಸು

('ಸ್ವಯಂವರ', ಮಧ್ಯಸ್ಥ ಪುಟ ೧೫೪)

ಕವಿ ಮೂರು ಲೋಕಗಳ ಮೂರು ಕಾಲಗಳ ಅದ್ಭುತ ವಿಸ್ಮಯ ವಿಷಾದಗಳ ವರ್ಣಚಿತ್ರಮಾಲೆಯನ್ನು ಸಾಕ್ಷಾತ್ಕರಿಸಿಕೊಳ್ಳುವುದು ಮರ್ತ್ಯದ ಮಣ್ಣಿನ ಪುಟ್ಟ ಕಂದನ ಕಣ್ಣುಗಳ ಮೂಲಕವೇ ಮತ್ತು ಇಂಥ ಸಾಕ್ಷಾತ್ಕಾರದ ರೂಪಕವಾಗಿ ಒದಗುವುದು ವರ್ತಮಾನದ ಆಧುನಿಕ ಕಾಲದ ಟೆಲಿವಿಜನ್ ರೂಪದಲ್ಲಿ! ಹೀಗೆ ಲಕ್ಷ್ಮಣರಾವ್ ಅವರ ಕಾವ್ಯ ಈ ಮಣ್ಣಿಗೆ, ಮಣ್ಣ ಬದುಕಿಗೆ ಬದುಕಿನ ಅಲೆಗಳಿಗೆ ಎಳೆಸದ ಮಧ್ಯಮ ಮಾರ್ಗದ ನಿರಾಳತೆಗೆ ವರ್ತಮಾನಕ್ಕೆ, ವರ್ತಮಾನದ ವಾಸ್ತವತೆಗೆ ತನ್ನೊಳಗೆ ಇಂಬುಗೊಡುತ್ತ ಅಕೆಡೆಮಿಕ್ ವಲಯದಾಚೆಗಿನ ಮನುಷ್ಯ ಸಹಜರಾದವರ ......... ಹಂದರವನ್ನು ತಲುಪುತ್ತದೆ.

'ಇವಳು ನದಿಯಲ್ಲ' ಕವಿತೆಯಲ್ಲಿ ಕವಿ ಕಾಣುವ ನಿರಾಳವನ್ನು ನೋಡಿ:

ನಿರಾತಂಕದಿಂದ ನಾ ಈಜಾಡಲು

ಮಕ್ಕಳು ಮರಿ ದೋಣಿಯಲ್ಲಿ



ವಿಹಾರ ಮಾಡಲು

ನಮ್ಮ ಹೂ ಹಣ್ಣು ತೋಟಕ್ಕೆ

ನೀರೂಡಲು,



ಸದಾ ಸಿದ್ಧ ಸಮೃದ್ಧ ಜೀವಜಲ,

ಇವಳೊಂದು ಪುಟ್ಟ ಕೊಳ;

ಕಾಣದ ಕಡಲಿನ ಕಡೆಗೆ, ಚೆನ್ನಮಲ್ಲಿಕಾರ್ಜುನನ ಎಡೆಗೆ ತುಡಿವ ಹಾತೊರೆವ ತೊರೆ ನದಿಯಾಗದೇ ತನ್ನವಳು ಪುಟ್ಟ ಕೊಳವಾಗಿರುವುದಕ್ಕೆ ಕವಿ ಸಂಭ್ರಮಪಡುತ್ತಾನೆ. ಹಾಗೆಯೇ ಮಧ್ಯಮ ಮಾರ್ಗದ ಸುರಕ್ಷಿತತೆಯನ್ನು ಹೇಳುವ ಈ ಸಾಲುಗಳನ್ನು ನೋಡಿ;

ನಿಮ್ಮ ಸೆಳೆತಕ್ಕೆ ಸಿಕ್ಕಿ

ನಿಮ್ಮ ಸುತ್ತ

ಪರಿಭ್ರಮಿಸುತ್ತ

ತೀರಾ ಹತ್ತಿರಾದವರು

ಸುಟ್ಟು ಕರಕಾದರು;

ಭೂತ-ಭವಿಷ್ಯಗಳಲ್ಲಿ ಚಾಚಿಕೊಂಡಿರುವ ಜೀವದ ಸಾತತ್ಯವು ದೇಹದ ಕ್ರಿಯೆಗಳ ವರ್ತಮಾನದಲ್ಲಿ ನಿಜಗೊಳ್ಳುವುದನ್ನು 'ಅಗ್ನಿಹೋತ್ರಿ' ಕವಿತೆ ಹೇಳುತ್ತದೆ. ಹಾಗೆಯೇ ದೇಹ ಕ್ರಿಯೆಗಳ ಈ ತಾರ್ಕಿಕತೆಯನ್ನು ಮೀರಿ ಉಳಿಯುವ ಮನಸ್ಸಿನ ಉಪಸ್ಥಿತಿಯನ್ನು ಈ ಕವಿತೆ ಗುರುತಿಸುತ್ತದೆ.

ಲಕ್ಷ್ಮಣರಾವ್ ಅವರ ಕಾವ್ಯದ ಒಂದು ಪ್ರಮುಖ ಹೊರಳುವಿಕೆಯನ್ನು ಈ ಸಂಕಲನದಲ್ಲಿ ಗುರುತಿಸಬಹುದು. ಕಾಮ ಮತ್ತು ಅದು ಸಾಧಿಸುವ ಜೀವಂತಿಕೆ ಅವರ ಹಿಂದಿನ ಕವನ ಸಂಕಲನಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಂಡಿರುವುದನ್ನು ವಿಮರ್ಶಕರೆಲ್ಲರೂ ಗುರುತಿಸಿದ್ದಾರೆ.

'ಶಾಂಗ್ರಿ-ಲಾ' ಸಂಕಲನದಿಂದ ನಂತರದಲ್ಲಿ ಕಾಮದ ಕುಸಿಯುವಿಕೆಯನ್ನು ಗುರುತಿಸುತ್ತ ಜೀವಂತಿಕೆಯ ಉದ್ದೀಪನದ ಪರ್ಯಾಯ ಮಾರ್ಗದ ಶೋಧನೆಯತ್ತ ಲಕ್ಷ್ಮಣರಾವ್ ಕಾವ್ಯ ಮುಖ ಮಾಡಿದೆ.

ಹೆಡೆಯೆತ್ತಿ ಆಡೋ, ನಾಗ

ಆ ಕಾಲ ಮುಗೀತಣ್ಣ ಈಗ

ಎಂದು ಆರಂಭವಾಗುವ ಕವಿತೆ ಕೊನೆಗೊಳ್ಳುವುದು

ಜೀವ ಮುಟ್ಟದೆ ಬಾಳ ರೇವು

ಸ್ವಂತ ಏಕಾಂತದ ರಾವು

ಹೆಡೆಯಣಿ ಬೆಳಕಲ್ಲಿ ಧ್ಯಾನ

ಗುಪ್ತನಿಧಿಯ ಜೋಪಾನ

ಎನ್ನುವ ತಿಳುವಳಿಕೆಯಲ್ಲಿ ಕವಿಗೆ ಒದಗುವ ಏಕಾಂತದ ಕಾವನ್ನು ಬೆಳಕಿನಲ್ಲಿ ನಡೆಸುವ ಧ್ಯಾನವನ್ನಾಗಿ ಪರಿವರ್ತಿಸಿಕೊಳ್ಳುವ ಆರೋಗ್ಯ ಪೂರ್ಣ ರೀತಿ ಹೊಳೆಯುತ್ತದೆ. ಪ್ರತೀಕ್ಷೆ ಕವಿತೆ ಒಂದು ಅನುಭವದ ಪ್ರತೀಕ್ಷೆಯಲ್ಲಿ ಕಾಯುತ್ತಿರುವ ಬಾಳನೇಯ್ಗೆಯ ಕಥನವನ್ನು ಕಟ್ಟುತ್ತದೆ.

'ಇವಳು ನದಿಯಲ್ಲ' ಸಂಕಲನದ ಕವಿತೆಗಳು ತಮ್ಮ ಸಫಲತೆಯೊಂದಿಗೆ ಒಪ್ಪಂದದಲ್ಲಿ ಭಾವಗೀತೆಗಳಂತಹ ಜಿಡಿಗವನಗಳ ಓದಿನ ಅನುಭವವನ್ನು ಕೊಡುತ್ತದೆ. ಲಕ್ಷ್ಮಣರಾವ್ ಅವರ ಕವಿತೆಗಳು ನೀಡುವ ಈ ರೀತಿಯ ಅನುಭವಕ್ಕೆ ಕಾರಣವೆಂದರೆ ಅವುಗಳ ವರ್ತಮಾನಕ್ಕೆ ಬದ್ಧವಾಗಿಳಿಯುವ ನಿಷ್ಠೆ. ಲಕ್ಷ್ಮಣರಾವ್ ಏನನ್ನಾದರೂ ಸಾಕ್ಷಾತ್ಕರಿಸುವುದು ಇವತ್ತಿನಲ್ಲಿ ಮತ್ತು ಮನುಷ್ಯನ ಇಂದಿನ ಬದುಕಿನ ನೆಲೆಯಲ್ಲಿ. ಇವರು ಕಟ್ಟುವ ಪ್ರತಿಮಾಸೌಧ ವರ್ತಮಾನದ ಬುನಾದಿಯ ಮೇಲೆ, ವರ್ತಮಾನದ ಆವರಣದೊಳಗೆ ಮೂಡಿ ನಿಲ್ಲುವುದಾಗಿದೆ. 'ಭೂಕಸ್ಮಿತ' ಕವಿತೆಯಲ್ಲಿ ಬರುವ ಮಾಯಾದೀಪ ನಮ್ಮನ್ನು ಅಲಾಉದ್ದೀನನ ಕಥೆಯ ಸ್ಮೃತಿಗೆ ಕರೆದೊಯ್ಯುವ ಬದಲು ಅದರಿಂದ ಉದ್ಭವವಾಗುವ ಭೂತವೇ ವರ್ತಮಾನಕ್ಕೆ ಬಂದು ನಿಲ್ಲುತ್ತದೆ ಮತ್ತು ಅವಾಸ್ತವಿಕ ಆದರ್ಶದ ಬಗೆಗೆ ವ್ಯಂಗ್ಯದ ಮುಗುಳ್ನಗೆ ಬೀರುತ್ತದೆ.

ಅದೇ ರೀತಿ 'ನೀವು ಹೇಳಿರೇ...' ಕವಿತೆಯಲ್ಲಿ ಪ್ರಶ್ನಿಸುವವಳು ಅಕ್ಕಮಹಾದೇವಿಯಲ್ಲ. ಈಕೆ ಇವತ್ತಿನ ಒಬ್ಬ ಹುಡುಗಿ-ಯಾವುದೋ ಹುಡುಗಿಯಲ್ಲ ರೈತ ಹುಡುಗಿ. ಈ ನಿರ್ದಿಷ್ಟತೆ ಇಲ್ಲಿಗೆ ನಿಲ್ಲುವುದಿಲ್ಲ. ಆಕೆ ಕೊಳವೆ ಬಾವಿಯಿಂದ ಗಿಡಮರಗಳಿಗೆ ನೀರೂಡುತ್ತ ಬೆಳೆದು ನಿಂತ ಹುಡುಗಿ ಮತ್ತು ಆಕೆಯ ತಂದೆಯು ತಾನು ಬೆಳೆದಿದ್ದ ತರಕಾರಿಗಳ ಬೆಲೆ ಕುಸಿದು ಕಂಗಾಲಾಗಿ ಬೆಳೆದು ನಿಂತ ಮಗಳನ್ನು ನೋಡುತ್ತಿರುವ

ಸಂದರ್ಭದಲ್ಲಿನ ಹುಡುಗಿ ತನ್ನ ತಂದೆ ತನ್ನನ್ನು ಹೀಗೆ ಕಂಗಾಲಾಗಿ ನೋಡುತ್ತಿರುವುದರ ಹಿನ್ನಲೆಯಲ್ಲಿ ಇರುವ ಕಟು ವಾಸ್ತವವನ್ನು ಅರಿಯಲಾರದ ಹುಡುಗಿ ಆಕೆ.

ವರ್ತಮಾನದ ವಸ್ತುವನ್ನು ಭೂತಕಾಲ ಅಥವಾ ಪುರಾಣ ಕಾಲಕ್ಕೆ ಕೊಂಡೊಯ್ದು ಅಲ್ಲಿ ಅದನ್ನು ಬಿತ್ತಿ ಬೆಳೆಯುವ ರೀತಿ ಒಂದು. ಆ ವಸ್ತು ಪುರಾಣದ ಆವರಣದೊಳಗೆ ಬೆಳೆದು, ಹೂ ಬಿಟ್ಟು ವರ್ತಮಾನದ ಗಂಧ ಹರಡುತ್ತದೆ. ಎಚ್.ಎಸ್.ವಿ ಮತ್ತು ಶಿವಪ್ರಕಾಶರ ರೀತಿ ಇಂತಹದು. ಲಕ್ಷ್ಮಣರಾವ್ ರೀತಿ ಇಂತಹದಲ್ಲ. ಅದು ಪುರಾಣವನ್ನು ತಂದು ವರ್ತಮಾನದಲ್ಲಿ ನಾಟಸುವ ರೀತಿ. ಇಲ್ಲಿ ಪುರಾಣವಸ್ತು ತನ್ನ ಮೂಲ ಬೇರನ್ನು ಕಳೆದುಕೊಂಡು ವರ್ತಮಾನದ ಬೇರು ಪಡೆದುಕೊಳ್ಳುತ್ತದೆ. ಮೊದಲ ರೀತಿಯು ಪರಂಪರೆಯೊಂದಿಗೆ ನಮಗೆ ಸಕೀಲ ಸಂಬಂಧವನ್ನು ಗಳಿಸಿಕೊಟ್ಟರೆ ಲಕ್ಷ್ಮಣರಾವ್ ರೀತಿ ಪರಂಪರೆಯ ಹಂಗಿಲ್ಲದ, ವರ್ತಮಾನದ ಜಿಡಿತ್ವವನ್ನು ನೀಡುತ್ತದೆ. ಇವಳು ನದಿಯಲ್ಲಿ ಸಂಕಲನದ ಕೊನೆಯ ಭಾಗದ ಕವನಗಳು (ಉದಾಃ ಭ್ರಮೆ) ಇಂಥ ರೀತಿಯಿಂದ ಭಿನ್ನವಾಗಲು ಉಪಕ್ರಮಿಸುವುದನ್ನೂ ನೋಡಬಹುದು.

೧೯೮೮ರಲ್ಲಿ ಪ್ರಕಟವಾಗಿರುವ ಲಿಲ್ಲಿಪುಟ್ಟಿಯ ಹಂಬಲ ಎಂಬ ಲಕ್ಷ್ಮಣರಾಯರ ಕವಿತಾ ಸಂಗ್ರಹದಲ್ಲಿ ಬೇಲಿ ಎಂಬ ಕವಿತೆಯೊಂದಿದೆ ಆ ಕವಿತೆಯಲ್ಲಿ

ಚಿಟ್ಟೆಯ ಕಣ್ಣಿಗೆ ಎಲ್ಲ ಬಣ್ಣ ಬಣ್ಣ;

ಕಾಕದೃಷ್ಟಿಗೆ ಅಂಕುಡೊಂಕು;

ಜಿಂಕೆಗಾದರೋ ಕೇವಲ ಕಪ್ಪು ಬಿಳುಪು;

ಗೂಬೆಗೆ ಕತ್ತಲೂ ಬೆಳಕು

ಎಂದು ಬರೆಯುವಾಗ

ಕವಿ ಬಹುದೂರ ನಡೆದು ಬಂದಿದ್ದಾರೆ. ತಮ್ಮ ಪಂಚೇಂದ್ರಿಯಗಳ ಬಗ್ಗೆ ಮೊದಲಿದ್ದ ವಿಶ್ವಾಸ ಸಹಜವಾಗಿಯೇ ಇಲ್ಲವಾಗಿದೆ. ಒಂದೇ ವಸ್ತು ಹಲವು ಕಣ್ಣಿಗೆ ಹಲವು ತೆರ ತೋರುವುದಾದರೆ ಆ ವಸ್ತುವಿನ ನಿಜಸ್ವರೂಪ ಯಾವುದು ಎಂದು ಕಾವ್ಯಸಹಜ ತರ್ಕದ ತೊಡಕಿನಲ್ಲಿ ಸಂದಿಗ್ಧತೆಗೆ ತಲುಪುತ್ತಾರೆ. ಇಂದ್ರಿಯಗಳ ಪಾಟವ ಕುಗ್ಗುವಂತೇ ಮಹತ್ವದ ದರ್ಶನಗಳೂ ಒದಗುವುದು ಬದುಕಿನ ವಿನ್ಯಾಸದಲ್ಲಿ ಸಹಜವಷ್ಟೇ ಕವಿಯ ತೊಡಕು ಇಂದ್ರಿಯಗಳ ತಾರುಣ್ಯ ಕಳೆದುಕೊಳ್ಳದೆ ಹೃದಯ ಮತ್ತು ಬುದ್ಧಿಯ ಪ್ರೌಢಿಮೆಗಳಿಸುವುದರಲ್ಲಿದೆ. ಮೊದಲನೆಯದು ಕಳೆದರೆ ಅಮೂರ್ತವೂ ಜಡವೂ ಆದ ಕಾವ್ಯ ಹುಟ್ಟುವಂತೆ, ಎರಡನೆಯದನ್ನು ಗಳಿಸದೆ ಹೋದರೆ ಬಾಲಿಶವೂ ದುರ್ಬಲವೂ ಆದ ಕಾವ್ಯ ಹುಟ್ಟುತ್ತಾ ಹೋಗುತ್ತದೆ.

---

೨೧) ರಾಘವೇಂದ್ರ ಪಾಟೀಲ "ಇವಳು ನದಿಯಲ್ಲ" (ಮುನ್ನುಡಿ)

ಕಣ್ಣು ನಾಲಿಗೆ ಕಿವಿ ಕೇವಲ ಇಂದ್ರಿಯಗಳಷ್ಟೆ,

ಅನುಭವಿಸುವ ಪ್ರಜ್ಞೆ ಮಿದುಳು

ಮಿದುಳು ಅಡೆಯಲ್ಲಿ ಕಾದು, ಪ್ರಜ್ಞೆ ಹಬೆಯೇರಿದರೆ

ಯಾಗಬಹುದು ಒಳತಿರುಳು

ಈ ಕೋಟ ಈ ನೋಟ ಈ ಬೇಲಿಯೊಳಗೇ

ನಮ್ಮ ಗೆಮ್ಮೆ, ನಮ್ಮ ಸಿದ್ಧಿ

ಬೇಲಿಯಾಚೆಗೂ ಕತ್ತಚಾಚಿ ಮೇಯುವ ಬುದ್ಧಿ

ಗ್ರಾಹ್ಯಗಳ ವಿಸ್ತೀರ್ಣ ವೃದ್ಧಿ

ಹೀಗೆ ಬೇಲಿಯಾಚೆಗೂ ಕತ್ತ ಚಾಚಿ ಮೇಯುವ ಹಂಬಲ ಲಕ್ಷ್ಮಣರಾವ್ ಕಾವ್ಯದ ಬೆಳವಣಿಗೆಯನ್ನೂ ಯುಕ್ತ ತಿರುವನ್ನೂ ಸೂಚಿಸುವಂತಿದೆ. ಇವರ ಅರ್ಥ ಲಕ್ಷ್ಮಣರಾವ್ ಅವರ ಪ್ರಾರಂಭದ ಕಾವ್ಯದಲ್ಲಿ ಗಂಭೀರವಾದ ಒಳಗುದಿಗಳು ಇರಲಿಲ್ಲವೆಂದಲ್ಲ ಇವರ ಈ ರಂಜಿಸುವ, ಕಚಗುಳಿಯಿಡುವ ಹೆಣ್ಣಿನ ಸುತ್ತ ಚಿನ್ನಾಟವಾಗುವ ಮಜಗಾರ ಕವಿ ಎಂಬ ಗ್ರಹಿಕೆ ಬೆಳೆದುಬಿಟ್ಟಿದೆ. ಖುಷಿ ಕೊಡುವ ಅವರ ಕಾವ್ಯದ ಆಳದಲ್ಲಿ ವಿಷಾದದ ಎಳೆಗಳು ಇದ್ದೇ ಇದ್ದವು ಎಂಬುದನ್ನು ಈ ಮೂಲಕ ನಾವು ತಿಳಿಯಬಹುದಾಗಿದೆ. 'ಪ್ರೇಮ ಗೀಮ' ಎಂಬ ಮೊದಲ ಸಂಗ್ರಹದ ಕವಿತೆಯಲ್ಲೇ ಅವರು ತಮ್ಮ ಹುಡುಗಿಗೆ ಹೇಳುತ್ತಾರೆ

ಕಣ್ಣಿಂದಲೇ ನನ್ನ ಹೃದಯ ವೃಥಾ ಬೆದಕಬೇಡ

ನನ್ನ ಹೃದಯ ಸೀಳಿ ನಾನು

ನಿನಗೆ ತೋರಲಾರೆ

ಏಕೆಂದರೆ

ಅಲ್ಲಿ ಕೊಳೆತು ನಾರುತ್ತಿದೆ ಒಂದು ಹೆಣ;

ಒಂದೇ ಒಂದು ಹೆಣ;

ಸೂಕ್ತ ಗುಂಯ್ಗುಡವ ನೊಣ;

ನನ್ನ ಒಬ್ಬಂಟಿ ಹೆಣ;

ಲಕ್ಷ್ಮಣರಾವ್‌ರನ್ನು ತೀವ್ರವಾಗಿ ಕಾಡುವ ಏಕಾಂಗಿತನ ಮತ್ತು ಸಾವಿನ ಪ್ರಜ್ಞೆ, ಅವರ ಹೃದಯದ ಆಳದಲ್ಲೇ ಗಮ್ಮನ್ನುತ್ತದೆ. ಅವರ ಬಹಿರ್ಮುಖತೆ ಅದರ ಏನೆಲ್ಲ ವಿಜೃಂಭಣೆಗೂ ಆಳದಲ್ಲಿ ಏಕಾಂಗಿಯಾಗಿ ನೋಯುವ ಅವರ ಹೃದಯವನ್ನು ಮುಚ್ಚಿಡಲಿಕ್ಕೆ ಸಾಧ್ಯವಾಗಿಲ್ಲ. ಅವರಿಗೆ ಗೆಳೆಯರು ಬೇಕಾಗುವುದು.

ಅದಕ್ಕಾಗಿ ಹುಡುಗಿಯರು ಬೇಕಾಗಿರುವುದು. ಅದಕ್ಕಾಗಿ ತಂದೆ-ತಾಯಿ, ತಂಗಿಯ ಪ್ರೀತಿ ಮತ್ತು ಈ ಎಲ್ಲ ತರುವ ಗೋಳುಗಳು ಬೇಕಾಗುವುದು ಅದಕ್ಕಾಗಿ. ಬೇಡುವ ಮಗುವಾಗಿ ಬಂದ ವಿಜ್ಞಾನ, ರಾಕ್ಷಸವಾಗಿ ಬೆಳೆದು ಮನೆಯ ನೆಲಗಟ್ಟು ಅಲುಗಿಸಿ ಸಾವಿನ ಪ್ರತಿರೂಪವಾದಾಗ ಆದ್ದರಿಂದ ಈಗೇನು ಮಾಡೋಣ? ಗಪಗಪ ಬಾಳು ಮುಕ್ಕೋಣ ಎಂದು ಬರೆಯುವ ಲಕ್ಷ್ಮಣರಾವ್ ಪ್ರಾಸದ ಲಘುತ್ವದಲ್ಲೂ ಕನಿಕರವನ್ನೇ ಮಥಿಸುತ್ತಾರೆ.

'ನನಗಿಂದು ಆಸ್ತಿಯೂ ಇಲ್ಲ ಅಸ್ತಿವಾರವೂ ಇಲ್ಲ' ಎನ್ನುತ್ತಲೇ ಹೊರಡುವ ಈ ಕವಿಯ ಪರಂಪರೆಯ ಸಂಬಂಧ ಕಡಿದುಕೊಂಡಿರುವಿಕೆ, ಒಂಟಿತನ, ತನ್ನನ್ನು ಮುಗಿಸಲು ಕಾದಿರುವ ಸಾವಿನ ಪ್ರಜ್ಞೆ ನವ್ಯದ 'ಮಾದರಿ ಮನೋಧರ್ಮವಾದರೂ ಇಷ್ಟೆಲ್ಲದರ ನಡುವೆಯೂ ಬದುಕಬೇಕೆಂಬ ಹಠ, ಬದುಕು ಬದುಕಲಿಕ್ಕಾಗಿ ಇದೆಯೆಂಬ ವಿಶ್ವಾಸ, ಅವರನ್ನು ಮತ್ತೆ ಬದುಕಿನ ಕಡೆ ಸೆಳೆಯುತ್ತದೆ.

ಬಾವಿಯ ಕಟ್ಟೆಯ ಮೇಲೆ ಕುಳಿತ 'ವಾಸಂತಿ' ಕೂಡ ಕೊನೆಗೆ ನಕ್ಕು ಬಾವಿಯ ಕಟ್ಟೆ ಬಿಟ್ಟು ಕೆಳಗಿಳಿಯುತ್ತಾಳೆ.

ಸವಿಯ ಬೇಕಾದ್ದಿನ್ನೂ ಒಹಳಪಿದೆ ಗೊತ್ತುಂಟೆ? ಎಂದು ಗೋಣಗಿಕೊಳ್ಳುವ ಈ ಹುಡುಗಿ ಕವಿಯ ಮನೋಧರ್ಮದ ಪ್ರತೀಕವೂ ಆಗುತ್ತಾಳೆ. ಆದ್ದರಿಂದಲೇ ತಮ್ಮ ಬರವಣಿಗೆಯ ಪ್ರಾರಂಭದ ದಿಸೆಯಲ್ಲೇ ಲಕ್ಷ್ಮಣರಾವ್‌ಗೆ-

ಈ ಅನುಮಾನ ಈ ಪರಿಮಾಣ, ಈ ಒಬ್ಬಂಟಿತನ

ಯಾರಿಗೆ ಬೇಕಾಗಿದೆ?

ಈ ಬಾರಿನ ಈ ಬೋರಿನ ಈ ನೀರೋಗಾನ

ನನಗಂತೂ ಸಾಕಾಗಿದೆ;

ಹೊಸಧಾಟಿ ಬೇಕಾಗಿದೆ;

ನಾ ಬಾಳ ಬೇಕಾಗಿದೆ

ಬಾರೆ, ಬಾ ಶಕುಂತಲೆ, ಶಾಪ ಕಳೆದಿದೆ,

ಮತ್ತೆ ನೆನಪು ಹೊಳೆದಿದೆ, ಬಾ;

ಭರತನನು ಇತ್ತ ತಾ; ಪ್ರೀತಿಯಿಂದ

ಮುತ್ತು ಕೊಡುತ್ತೇನೆ;

ನಿನ್ನನ್ನು ಬಿಗಿಯಾಗಿ ಅಪ್ಪಿಕೊಳ್ಳುತ್ತೇನೆ;

ಬಾಳನ್ನು ಇಡಿಯಾಗಿ ಒಪ್ಪಿಕೊಳ್ಳುತ್ತೇನೆ-

ಎಂದು ಬರೆಯುವುದು ಸಾಧ್ಯವಾಗುತ್ತದೆ. ಈ ನಿರ್ಧಾರದ ಭಾವುಕ ಕ್ಷಣದಲ್ಲೂ ಗಳಗಳ ಅತ್ತು ಬಿಡುತ್ತೇನೆ ಎಂದು ಬರೆಯುವ ಮೂಲಕ ತನ್ನ ಒಬ್ಬಂಟಿತನ ಬೋರು ಇತ್ಯಾದಿ ಕೇವಲ ಆರೋಪಿತ ವಾಮದಲ್ಲಿ ಎಂಬುದನ್ನು ಸೂಚಿಸುವುದು ಸಾಧ್ಯವಾಗಿರುವುದು ಲಕ್ಷ್ಮಣರಾವ್ ಕಾವ್ಯದ ಗೆಲುವಿನ ಕ್ಷಣಗಳಲ್ಲಿ ಒಂದು.

'ನನಗಿಂದು ಆಸ್ತಿಯೂ ಇಲ್ಲ ಅಸ್ತಿವಾರವೂ ಇಲ್ಲ'- ಎಂಬ ಲಕ್ಷ್ಮಣರಾವ್‌ರವರ ಉದ್ಘೋಷವನ್ನು ಹಿಂದೆಯೇ ಪ್ರಸ್ತಾಪಿಸಿದ್ದೇನೆ. ಪರಂಪರೆಯಿಂದ ಕಡಿದುಕೊಳ್ಳುವುದು ಅಷ್ಟು ಸುಲಭವಲ್ಲ ಎಂಬುದೂ ಅವರಿಗೆ ಗೊತ್ತಿದೆ.

'ಅಪ್ಪನ ಚಿಪ್ಪೊಡೆದುಕೊಂಡು

ಹೊರಗೆ ನುಣುಚಿಕೊಂಡ ನನಗೆ'- ಎಂದು ಬರೆದವರು, ಹತ್ತಿರದಲ್ಲೇ

'ಅಮ್ಮನ ಹೃದಯಾಳದಲ್ಲಿ

ಗಾಳಕ್ಕೆ ಸಿಕ್ಕ ಮೀನು ನಾನು' ಎಂದೂ ಚಡಪಡಿಸುತ್ತಾರೆ.

ಮರವೇ ಸನಾತನ

ಬೇರ ಬಿಟ್ಟಿರುವೆ ಆಳ

ಆ ತಾತನ ಈ ತಾತನ

ಬಿಳಲ ಬಿಟ್ಟಿರುವೆ ಬಹಳ;

ನಾನೂ ಒಂದು ಬಿಳಲಾಗಲೇ? ಎಂದು ಅಸಮ್ಮತಿಯಲ್ಲಿ ಕಳವಳಿಸುವ

ಕವಿ, ಕೊನೆಗೆ

ಆದರೆ ಬೀಜದಲ್ಲೂ

ನನ್ನ ಗೋತ್ರ;

ನಾ ಹೇಗಾದೇನು

ಸ್ವತಂತ್ರ?

ಎಂದು ವಸ್ತು ಸ್ಥಿತಿಯನ್ನು ದುಮ್ಮಾನದಿಂದ ಒಪ್ಪಿಕೊಳ್ಳುವ ಸ್ಥಿತಿಗೆ ಮುಟ್ಟುತ್ತಾರೆ.

ಲಕ್ಷ್ಮಣರಾವ್ ಕಾವ್ಯದಲ್ಲಿ ಅಪ್ಪ ಮಗನ ತಿಕ್ಕಾಟ ಹೀಗೆ ಒಂದು ಪ್ರತೀಕಾತ್ಮಕ ಅರ್ಥವನ್ನು ಉದ್ದಕ್ಕೂ ಪಡೆಯುತ್ತಾ ಹೋಗುತ್ತದೆ. ಆಗ ಅಪ್ಪ ಕೇವಲ ಅಪ್ಪನಾಗಿ ಉಳಿಯದೆ ಪರಂಪರೆಯ, ಸಂಪ್ರದಾಯದ, ಹೊಣೆಗಾರಿಕೆಯ ಕೊನೆಗೆ ದೈವದ ಪ್ರತೀಕವೂ ಆಗುತ್ತಾನೆ. ನ್ಯಾಯವಾಗಿಯೇ ಆಗ ತಾಯಿ ಸದ್ಯದ ಬದುಕಿನ, ಮಣ್ಣಿನ, ಐಂದ್ರಿಕ ಜಗತ್ತಿನ ಪ್ರತೀಕವಾಗಿ ಪರಿಣಮಿಸುತ್ತಾಳೆ. ಗೋಪಿ ಮತ್ತು ಗಾಂಡಲೀನದಲ್ಲೇ

'ಅಪ್ಪ ಮತ್ತು ಅಮ್ಮ' ಎಂಬ ಕವಿತೆಗಳಲ್ಲಿ ಈ ಪ್ರತೀಕಾತ್ಮಕತೆಯ ಸೂಚನೆಗಳು ಬಂದಿರುವುದನ್ನು ಕಾಣಬಹುದಾಗಿದೆ.

ಕಟ್ಟ ಕಡೆಯ ಸೊನ್ನೆ ಕತ್ತ ಸುತ್ತಿದಾಗ
ಜೀವ ಒತ್ತಿದಾಗ,
ಅಮ್ಮನನ್ನು,
ಬೆಚ್ಚನೆ ಹೃದಯಗಳನ್ನು
ಈ ಭೂಮಿಯನ್ನು
ಮನಸ್ಸು ಬಯಸುತ್ತೆ
ಆದರೂ, ಅಪ್ಪನಾಗಿಯೂ ಅಪ್ಪನೆನ್ನಿಸದ
ಅಪ್ಪನನ್ನು ಕಂಡಾಗ
ಈ ಭಂಡ ಬ್ರಹ್ಮಾಂಡದಲ್ಲಿ
ಮೊಂಡು ಹಿಡಿದಾದರೂ
ಅಪ್ಪನನ್ನು ಹುಡುಕಬೇಕೆನ್ನಿಸುತ್ತೆ

'ಸಖೀಗೀತ'ದಲ್ಲಿ ಬರುವ ಕೆಳಗಿನ ಸಾಲುಗಳು ನನ್ನ ಸೂಚನೆಯನ್ನು ಸಮರ್ಥಿಸುವಂತಿವೆ.

ಹರ್ಕ್ಯುಲಿಸ್ ಅಟ್ಲಾಸನಿಗೆ ಹೇಳಿದೆ
ಅಪ್ಪ ನನ್ನ ಹುಡುಗಿಯ ನನಗೆ ತಂದು ಕೊಟ್ಟರೆ
ನಿನ್ನ ಈ ಹೆಣಭಾರದ ಹೊರೆ
ನಿನ್ನ ಪರಂಪರೆ
ನಾನು ಹೊರಲು ಸಿದ್ಧ
ವಿರುದ್ಧವಿಲ್ಲದೆ ನಿನ್ನೆಲ್ಲ ನಿಯಮಗಳಿಗೂ ನಾನು ಬದ್ಧ

ಇತ್ತೀಚಿನ ಲಿಲ್ಲಿಪುಟ್ಟಿಯ ಹಂಬಲದಲ್ಲಿ ಇದೇ ಪ್ರತೀಕ 'ಸಂವಾದ' ಎಂಬ ಘನವಾದ ಕವಿತೆಯಾಗಿ ಬೆಳೆಯುತ್ತದೆ. ಅದರ ವಿಶೇಷವೆಂದರೆ ಹರ್ಕ್ಯುಲಿಸ್ಸನಂತೆ ಅಟ್ಲಾಸನೂ ತನ್ನ ಮಾತಿನ ಸರತಿ ಪಡೆಯುವುದು, ಏಕಪಕ್ಷೀಯ ಬಲವಾಗದಿರುವುದು ಗಮನಿಸಬೇಕಾದ ಸಂಗತಿ.

---

೨೨) "ಕೊಲಂಬಸ್" ಬೆನ್ನುಡಿ – ಕೆ.ವಿ.ತಿರುಮಲೇಶ್

ಹೊರಡುವುದಕ್ಕೆ ಮುಂಚೆ ಒಂದು ಸಂದೇಹ ಹುಸಿಯಾಸೆ;

ಆಕಾಶಕ್ಕೆ ನಮ್ಮದೇ ಆಧಾರ ಬೇಕೆ?

ಇದು ನಮಗೆ ಶಾಪವೋ ಅಥವಾ ಮೂಢ ಭ್ರಮೆಯೋ?

ಇರಬಹುದೆ ನಮ್ಮ ಕೈಲೇ ನಮ್ಮ ವಿಮೋಚನೆ?

'ಸಂವಾದ'ದ ಮುಖ್ಯ ಸಾಲುಗಳು 'ವಾ–ನರಗೀತೆ'ಯ

ವಿಕಾಸದ ನಿಚ್ಚಣಿಕೆಗೆ ಇನ್ನೆಷ್ಟೋ ಇವೆ ಮೆಟ್ಟಿಲು.

ನರನಾಗಿ ನಿಂತರೆ ಸಾಕೆ?

ರಾಮಪ್ರಜ್ಞೆ ತಪ್ಪಿದ್ದಾನೆ, ಮತ್ತೆ ಸಂಜೀವಿನಿಗೆ

ಕಪಿಯನ್ನೇ ಕಾದು ಕೊಡಬೇಕೆ?

– ಎಂಬ ಪ್ರಶ್ನೆಗೆ ಉತ್ತರದ ಹಾಗೆ ಬಂದಿವೆ.

ಈ ವಿಮೋಚನೆಯ ಹೋರಾಟ 'ಗ್ರಸ್ತ' ಕವಿತೆಯಲ್ಲೇ ಶುರುವಾಗಿ 'ಸಂವಾದ'ದಲ್ಲಿ ತಾತ್ವಿಕ ಚಿಂತನೆಯ ನೆಲೆ ಪಡೆದು.'ಕೊಲಂಬಸ್'ನಲ್ಲಿ ಪ್ರತೀಕಾತ್ಮಕ ಹುಡುಕಾಟವಾಗಿ ಪರಿಣಮಿಸುತ್ತದೆ. ಇಲ್ಲಿ ಹೊಸಲೋಕದ ಹುಡುಕಾಟಕ್ಕೆ ಕೊಲಂಬಸ್ ಹೊರಡುತ್ತಾನೆ. 'ನಾನು' ಕವಿತೆಯ ಧೋರಣೆಗೂ 'ಕೊಲಂಬಸ್' ಕವಿತೆಯ ಧೋರಣೆಗೂ ಎಷ್ಟು ಅಂತರ! ಆಶ್ಚರ್ಯವೆಂದರೆ ಇಲ್ಲಿ ಹೊಸ ಲೋಕವೆಂಬುದು ಅಪ್ಪನ ಎಂದರೆ ಸೃಷ್ಟಿ ಮೂಲದ ರಹಸ್ಯ ಶೋಧವೂ ಹೌದು.

ಲೋಳೆ ಲೋಳೆ ರಾತ್ರಿ,

ಎಲ್ಲಿ? ಎಲ್ಲಿ ಆ ಹೊಸ ಧರಿತ್ರಿ?

ಪ್ರಭು, ಬೀಜ–ವೃಕ್ಷ ಒಗಟಿನಂತೆ

ನನ್ನ ನಿನ್ನ ಇರುವು;

ನಾನಿಲ್ಲದೆ ನೀನೂ ಇಲ್ಲ,

ನೀಡು ನಿನ್ನ ಸುಳಿವು.

'ಸಂದಿಗ್ಧ', 'ಬೇಲಿ' ಲಿಲ್ಲಿಪುಟ್ಟಿಯ ಹಂಬಲ ಮೊದಲಾದ ಕವಿತೆಗಳಲ್ಲಿ ಕಾಣುವ ಈ ಮಹತ್ವಾಕಾಂಕ್ಷೆ 'ಕೊಲಂಬಸ್' ಈ ಕವಿತೆಯಲ್ಲಿ ಶಿಖರ ಮುಟ್ಟುತ್ತದೆ.

ಕೊನೆಗೆ ಕೊಲಂಬಸ್‌ನನ್ನು ಆಸೆ ಮತ್ತು ನಿರಾಶೆಯ ಸಂದಿಗ್ಧದಲ್ಲಿ ನಿಲ್ಲಿಸಿರುವುದರಿಂದ ಶೋಧದ ಮುಂದಿನ ದಾರಿಯನ್ನು ತೆರೆದಿಡುವುದೂ ಸಾಧ್ಯವಾಗಿದೆ.

ಈ ಅಚಿಂತ್ಯದ ಸೆಳೆತದೊಂದಿಗೆ, ಮೂರ್ತ ಚೆಲುವಿನ ಆಕರ್ಷಣೆಯೂ ಲಕ್ಷ್ಮಣರಾವ್‌ರನ್ನು ಮೊದಲಿನಿಂದ ಕಾಡುತ್ತಾ ಬಂದಿದೆ. ಇಡಿಯಾಗಿ ಅಪ್ಪಿಕೊಳ್ಳುವುದೆಂದು ಹಿಂದೊಮ್ಮೆ ಅವರು ಪ್ರತಿಜ್ಞೆ ಮಾಡಿದರಷ್ಟೆ! ಆದರೆ ಬದುಕು ಅಷ್ಟು ಸಲೀಸಾಗಿ ತೆಕ್ಕೆಗೆ ಬರುವಂಥದಲ್ಲ. ನಡುವೆ ನೂರಾರು ಅಡ್ಡಗೋಡೆಗಳು. ಇಂಥ ತಡೆಗಳು ಕೆಲವು ಹೊರಗಿನವಾದರೆ ಕೆಲವು ತನ್ನಲ್ಲೇ ಬೆಳೆದು ನಿಂತವು.

ಅದರ ಫಲವೆಂದರೆ ಧಾರುಣವಾದ ವಿಪ್ರಲಂಬ ಮತ್ತು ತನ್ಮೂಲಕ ಉಂಟಾಗುವ ಆಳವಾದ ವಿಷಾದ. ರಿಪೋಲಿಗೆ ಹೋದ ಹುಡುಗನಿಗೆ ಸಂತೋಷವಾಗಿ ಗಾಂಡಲೀನಳನ್ನು ನೋಡಿಕೊಂಡು ಬರುವುದು ಆಗಲಿಲ್ಲವಲ್ಲ! ಅಲ್ಲಿ ವೆಂಕಟಲಕ್ಷ್ಮಿ ಮತ್ತು ಪಾಪಪ್ರಜ್ಞೆ ಒಮ್ಮೆಗೇ ಠಕರಾಯಿಸಿ ಉಂಟಾಯಿತು. ಶಕೂ ಮತ್ತು ನಾಯಕನ ನಡುವೆ ಅಧ್ಯಾಪಕ ವೃತ್ತಿ. ಲಿಲ್ಲಿಪುಟ್ಟಿ ಮತ್ತು ಗಲಿವರನ ನಡುವೆ ಪಾಪ ಪ್ರಜ್ಞೆ– ಹೀಗೆ ಇಷ್ಟರ ಮಧ್ಯೆ ಸದಾ ಕಾವಲಾಗುವ ಪತ್ನಿಯ ಪ್ರತಿಮೆ ಬೇರೆ.

ಇಡಿಯಾದ ಬದುಕು ಎಂಬುದು ಹೆಣ್ಣನ್ನೂ ಒಳಗೊಂಡು ಹಿಗ್ಗಿದಾಗ ಸುತ್ತಲಿನ ಸಮಾಜದ ಕ್ಷುಲ್ಲಕತೆ ಆಲಿಂಗನವಲ್ಲಿ ತೊಡಕನ್ನು ತರುತ್ತದೆ. 'ನನ್ನೂರು' ಎಂಬ ಕವಿತೆಯಲ್ಲಿ ಈ ತೊಳಲಾಟ ಬಂದಿದೆ. ಪ್ರಸ್ತುತ ರಾಜಕಾರಣ. ಉದ್ಯಮಯುಗ ವೈಜ್ಞಾನಿಕ ಸಾಧನೆಗಳು ಕವಿಯ ಆಲಿಂಗನ ತತ್ವವನ್ನು ಛೇಡಿಸುತ್ತಾ ನಿಲ್ಲುತ್ತವೆ.

'ತುರ್ತಿನ ಗುರ್ತುಗಳು' 'ವಿಜ್ಞಾನ' 'ವಶೀಕರಣ' 'ಕಾಯುವುದು ಕಷ್ಟ' 'ಕೆಂಪು' 'ಕಡಲತೀರದಲ್ಲಿ' ಮೊದಲಾದ ಪದ್ಯಗಳನ್ನು ಈ ದೃಷ್ಟಿಯಿಂದ ನೋಡಬಹುದು.

ಕಡಲ ತೀರದಲ್ಲಿ ಕವಿತೆಯಲ್ಲಿ ತನ್ನ ಸಂಸಾರದೊಂದಿಗೆ ಕವಿತೆಯ ನಾಯಕ ಮಂಗಳೂರಿನ ಕಡಲ ತೀರಕ್ಕೆ ಪ್ರವಾಸ ಬಂದಿದ್ದಾನೆ. ಅಲ್ಲಿ ಸಂಸಾರದ ಒಬ್ಬೊಬ್ಬರೂ ತಮ್ಮ ತಮ್ಮ ಜಗತ್ತಿನಲ್ಲಿ ಮುಳುಗುತ್ತಾರೆ.

ಬಂಡೆಯ ಮರೆಯಲ್ಲಿ

ತಂದೆಗೆ ಕಾಣದ ಹಾಗೆ

ಸಿಗರೇಟೆಳೆಯುತ್ತಾ

ಇಂದ್ರಿಯಗಳಿಗೆ ಧಕ್ಕಿದ್ದನ್ನು

ನನಗೆ ತಕ್ಕ

ವಾಗರ್ಥಗಳಲ್ಲಿ

ಅಳೆಯುತ್ತಾ

ಕವಿಯಾಗಿ

ನಾನು

ಇಲ್ಲಿಗೂ ಅರಸಿ ಬಂದ

ಹರಕು ಚಡ್ಡಿ

ತೆರೆದೆ

ಚಾಚಿದ ಎಳೆ ಒಣಕಲು ಕೈ

ಧೀನ ಬೊಗಸೆಗಣ್ಣು;

ಗೊಂಬೆಯಲ್ಲಿ ನನ್ನ ಬಿಂಬ

ಸೊನ್ನೆ, ಜೀವರೇಣು

ಇದು ಕವಿಯನ್ನು ತನ್ನ ಪಾಡಿಗೆ ತಾನು ಸ್ವಸ್ಥವಾಗಿ ಉಳಿಯಲು ಬಿಡದ ಲೋಕದ ಪಾಡು. ಇದನ್ನು ತಪ್ಪಿಕೊಳ್ಳುವಾಗ ಅಪಾರವಾದ ದುಃಖವನ್ನು ಜೊತೆಗೆ ತೆಗೆದುಕೊಳ್ಳಬೇಕಾಗುತ್ತದೆ. ಹಾಗೆ ತೆಗೆದುಕೊಳ್ಳುವುದರಲ್ಲೇ ಕಾವ್ಯದ ಘನತೆಯೂ ಇರುತ್ತದೆ.

'ಗೋಪಿ ಮತ್ತು ಗಾಂಡಲೀನ' ಎಂಬ ಲಕ್ಷ್ಮಣರಾಯರ ಮೊದಲ ಸಂಗ್ರಹದಲ್ಲೇ ಅವರ ಫೋಟೋಗ್ರಾಫರ್' ಎಂಬ ಪ್ರಸಿದ್ಧ ಕವಿತೆ ಇದೆಯಷ್ಟೆ? ಈ ಕವಿತೆ ಕಾವ್ಯ ಕರ್ಮದ ಪಾಡನ್ನೂ ಹೇಳುತ್ತದೆ. ಮೂಲ ಅನುಭವದ ಕ್ಷಣದ ಭಂಗಿಗಳನ್ನು ಕಲೆಯಾಗಿ ಹಿಡಿದಿಡುವ ಕವಿಗೆ ಕೊನೆಗೆ ಉಳಿಯುವುದು ನೆಗಟಿವ್‌ಗಳು ಮಾತ್ರ ಕಲೆಯೆಂಬುದು ಕವಿಯ ವೈಯಕ್ತಿಕ ಚಪಲಗಳ ಪೂರೈಕೆಗೆ ಒದಗಬಾರದಷ್ಟೆ? ಚಪಲಗಳನ್ನು ಮೀರಿದ ನೆಲೆಗೆ ಕವಿ ತಲುಪಿದಾಗ ಮೂಲವಸ್ತು ಕೈ ಜಾರಿತೆಂದು ತಹತಹ ಪಡುವುದಿಲ್ಲ. ತಾನು ಆಕ್ರಮಿಸಬೇಕಾಗುವುದು ಕಲೆಯ ಮೂಲಕವೋ ಲೌಕಿಕದ ಮೂಲಕವೋ ಎಂಬುದು ಮೊದಲು ಅವನಿಗೆ ಸ್ಪಷ್ಟವಾಗಬೇಕಾಗುತ್ತದೆ. ಹಾಗಾದಾಗ ಮೂಲವಸ್ತು ಮತ್ತು ಪ್ರತಿ ವಸ್ತುಗಳೆರಡರ ಹಂಗನ್ನೂ ಹರಿದು ಕವಿ ತನ್ನ ಪಾಡಿಗೆ ತಾನು ತನ್ನ ವೈಯಕ್ತಿಕ ತಪಾತ್ರಯಗಳನ್ನು ಎದುರಿಸಲು ಸಾಧ್ಯವಾಗುವುದು.

ಒಂದು ಬಾರಿ ಲಕ್ಷ್ಮಣರಾಯರು ತಮ್ಮ ಹೆಂಡತಿ ಮಗನೊಂದಿಗೆ ಬಸ್ಸೊಂದರಲ್ಲಿ ಪ್ರಯಾಣಿಸುತ್ತಿರುವಾಗ ನಾಯಕ ಪಕ್ಕದ ಸೀಟಿನಲ್ಲಿ ಕುಳಿತಿದ್ದ ಓರ್ವ ಮುಸ್ಲಿಂ ತರುಣಿಯಿಂದ ಆಕರ್ಷಿತನಾಗುತ್ತಾನೆ. ಆಕೆಯ ಸಹಜ ಸೌಂದರ್ಯವನ್ನು ಎಲ್ಲ ಮಡಿವಂತಿಕೆಗಳನ್ನೂ ಭಯಗಳನ್ನೂ ಮೀರಿ ಅಥವಾ ಮರೆತು ಆಸ್ವಾದಿಸುವುದು ಅವನಿಗೆ ಸಾಧ್ಯವಾಗುತ್ತದೆ. ಅಂಥ ಚೆಲುವು ತಾನಾಗಿ ಕಣ್ಣ ಮುಂದೆ ಬಂದಾಗ ನೋಡದೆ ಬಿಗುಮಾನದಿಂದ ಮುಖ ಹೊರಳಿಸಿ ಕೂಡುವುದು ಅಪರಾಧ ಎನ್ನಿಸುತ್ತದೆ ಅವನಿಗೆ.

---

೨೩) "ಕೊಲಂಬಸ್" ಬೆನ್ನುಡಿ – ಕೆ.ವಿ.ತಿರುಮಲೇಶ್

ಆದ್ದರಿಂದ ಮತ್ತೆ ಇಂಥ ಅವಕಾಶ ಸಿಕ್ಕುತ್ತೋ ಇಲ್ಲವೋ

ಎಂಬ ಆತಂಕದಲ್ಲಿ, ಬಸ್ಸಿನಿಂದ ಇಳಿಯುವ ತನಕ,

ಹಾಗೂ ಹೀಗೂ ಮಾಡಿ

ಅವಳನ್ನು ಕಣ್ತುಂಬ ನೋಡಿ ಬಿಟ್ಟೆ

ಒಳಗಣ್ಣಿನ ತೆರೆಯ ಮೇಲೆ

ಆ ಚೆಲುವನ್ನು ಹಿಡಿದಿಟ್ಟುಕೊಂಡು ಬಿಟ್ಟೆ

ನಿಲ್ದಾಣದಲ್ಲಿ ಇಳಿದು

ಅವಳು ಎತ್ತ ಹೋದಳೋ ಗೊತ್ತಿಲ್ಲ.

ಅದರೆ ನನ್ನ ಉದ್ವಿಗ್ನತೆಯೆಲ್ಲ ಯಾವ ಗಳಿಗೆಯಲ್ಲೋ ಮಾಯವಾಗಿ

ಮನಸ್ಸು ತಿಳಿಯಾಗಿತ್ತು,

ತೃಪ್ತವಾಗಿತ್ತು.

ಏನೋ ಖುಷಿಯಲ್ಲಿತ್ತು

ಪ್ರೀತಿಯಿಂದ ನನ್ನ ಪುಟ್ಟ ಮಗನಿಗೆ ಮುತ್ತು ಕೊಟ್ಟೆ,

ಹೆಂಡತಿಯೊಂದಿಗೆ ನಗುನಗುತ್ತಾ ಮಾತನಾಡಿದೆ

ಇನ್ನು ನೀವು

ಏನಾದರೂ ತಿಳಿದುಕೊಳ್ಳಿ

ಪರವಾಗಿಲ್ಲ

ಈ ಸಾಲುಗಳ ಹಿಂದಿರುವ ಕವಿಯ ಮನೋಧರ್ಮ ಪ್ರೌಢವಾದುದು. ಇಲ್ಲಿ ಕಾಣುವ ಇಂದ್ರಿಯಗಳ ಪಾಠವ ಮತ್ತು ಹೃದಯದ ಪ್ರೌಢಿಮೆ ಈ ಕವಿಯನ್ನು ಇನ್ನೂ ಬಹುದೂರ ನಡೆಸಬಲ್ಲದು.

ಭವಿಷ್ಯದ ಜಗತ್ತಿನ ಬಗ್ಗೆ ಫಲಾಪೇಕ್ಷೆಯಿಲ್ಲದ ಪ್ರೀತಿ ಈ ಕವಿಗಿದೆ ಎಂಬುದು ಇನ್ನೊಂದು ಶುಭಸೂಚನೆ.

ಮೊದಲ ಸಂಗ್ರಹದ 'ಸಾಕು' ಪದ್ಯದಲ್ಲಿ ಶಕುಂತಲೆಯನ್ನು ಒಪ್ಪಿಕೊಳ್ಳುವಾಗ–

ಭರತನನ್ನು ಇತ್ತ ತಾ; ಪ್ರೀತಿಯಿಂದ

ಮುತ್ತು ಕೊಡುತ್ತೇನೆ

ಎಂದು ಬರೆದಾಗಲೇ ಇದರ ಸೂಚನೆ ಕಾಣಿಸುತ್ತದೆ. ಇದೇ ಸೂಚನೆ ಎರಡನೇ ಸಂಕಲನ ಟುವಟಾರದ ತನ್ನ ಧನ್ಯತ ಪದ್ಯಗಳಲ್ಲಿ ಬೆಳೆದು ಅನಂತರದಲ್ಲಿ ಲಿಲ್ಲಿ ಪುಟ್ಟಿಯ ಹಂಬಲದ ಕವಿತೆ ಕಡಲ ತೀರದಲ್ಲಿ ಒಂದು ಹಿತವಚನ 'ಗುಂಡಪ್ಪ ವಿಶ್ವನಾಥ್' ಮೊದಲಾದ ಕವಿತೆಗಳಲ್ಲಿ ಹೊಳಹು ಹಾಕುತ್ತಾ ಬಂದಿರುವುದನ್ನು ಕಾಣಬಹುದು. ಜೊತೆಗೆ ಆತ್ಮ ವಿಮರ್ಶೆಯ ಕಾಳಜಿಯೂ ಲಕ್ಷ್ಮಣರಾವ್‌ಗೆ ಸಾಕಷ್ಟಿದೆ.

ನಾನು ಸಹ ಈ ಹಿಂದೆ

ಕೂತ ಕಡೆ ಕೂತು ಹಣ ಗಳಿಸುವ ಸೆಟ್ಟರ

ಶ್ರಾದ್ಧದೂಟದ ಕಮಟು ಜನಿವಾರದ ಭಟ್ಟರ

ಊರ್ಧ್ವನೋಟದ ಸ್ಥಿತ ಪ್ರಜ್ಞ ಕವಿ ಲಂಪಟರ

ಬೊಜ್ಜು ಬೆಲೂನುಗಳಿಗೆ

ನನ್ನ ಮುಳ್ಳು ಮಾತಿನ ಮನ ಚುಚ್ಚಿ,

ಗಾಳಿಯಿಳಿಸಿ ಬಿಡುವ ಘೋಷಣೆಗಳನ್ನು ನನ್ನ ಕಾವ್ಯದ ತುಂಬ ಕೊಚ್ಚಿದ್ದೆ;

ನನ್ನ ವಿಮ್ನೋದರವನ್ನು ಪ್ರದರ್ಶನಕ್ಕೆ ಹೆಚ್ಚಿದ್ದೆ

ಕ್ಷಮಿಸಿ.

ಈಗ ನನ್ನ ಮಾತುಗಳೂ ಬಾತುಕೊಂಡು,

ನನ್ನ ಮಿದುಳಲ್ಲೂ ಬೊಜ್ಜು ಶುರುವಾಗಿದೆ

ದೇಹದ 'ವ್ಯಕ್ತ ಮಧ್ಯ'ದ ಜೊತೆಗೆ

ಆದ್ದರಿಂದ ಈ ಕೂಡಲೇ, ಮೂರನೇ ಆಯಾಮದ ಬಗ್ಗೆ

ಸರ್ವಾಂಗಾಸನದ ಯೋಗ ವ್ಯಾಯಾಮದ ಬಗ್ಗೆ

ಎಚ್ಚರವಾಗುತ್ತೇನೆ.

ದಯವಿಟ್ಟು ಕ್ಷಮಿಸಿ

ನಲವತ್ತರ ಹತ್ತಿರ ಹತ್ತಿರ ಬರುತ್ತಿರುವಂತೆ ಈ ಬೊಜ್ಜು ಈ ಅಗ್ನಿಮಾಂದ್ಯ ಎಲ್ಲರನ್ನೂ ಕಾಡುವಂಥದೇ ಅದರ ಅರಿವು ಮತ್ತು ಅದನ್ನು ನಿವಾರಿಸಿಕೊಳ್ಳಬೇಕೆಂಬ ಹಠ ಲಕ್ಷ್ಮಣರಾವ್‌ಗೆ ಇರುವುದು ಶುಭ ಸೂಚಕ. ಇದರ ಒಳ್ಳೆಯ ಪರಿಣಾಮಗಳೂ ಈಗಾಗಲೇ ಅವರ ಕಾವ್ಯದಲ್ಲಿ ಕಾಣಿಸಿಕೊಂಡಿವೆ.

---

೨೪) "ಕೊಲಂಬಸ್" ಬಿ.ಆರ್. ಲಕ್ಷ್ಮಣರಾವ್, ಬೆನ್ನುಡಿ ಕೆ.ವಿ.ತಿರುಮಲೇಶ್

ಬಿ.ಆರ್.ಎಲ್‌ರವರ ಗುಂಡಪ್ಪ ವಿಶ್ವನಾಥ್‌ದಲ್ಲಿ, 'ಟುವಟಾರ' ಗದ್ಯಮಯತೆಯಾಗಲೀ ಕಾಣುವುದಿಲ್ಲ. ಗಾಂಡಲೀನ ವಸ್ತ್ರಗಳನ್ನು ಕಳಚುವಂತೆ ಲಕ್ಷ್ಮಣರಾಯರ ಹೊಸ ಕವಿತೆ ಚಪಲ, ಪ್ರಾಸದ ಹುಚ್ಚು ಹೊದ್ದುಕೊಂಡ ಬಿಗುಮಾನವನ್ನು ಕಳಚಲಿಕ್ಕೆ ತೊಡಗಿದೆ.

ಕೇವಲ ವ್ಯಕ್ತಿ ಚಿತ್ರದಂತೆ ತೊಡಗುವ 'ಗುಂಡಪ್ಪ ವಿಶ್ವನಾಥ್' ಕವಿತೆ ತನ್ನ ಹಣವನ್ನೂ ಮೀರಿ ಬೆಳೆಯ ತೊಡಗುವುದು ಅದರಿಂದ ಸಾಧ್ಯವಾಗಿದೆ. ಇಲ್ಲಿ ಮಾತು ಕಡಿಮೆ, ಶಿಲ್ಪ ಬಿಗಿ, ಒಳ ಹೆಣಿಗೆಗಳು ದಟ್ಟ, ಕವಿತೆಯ ನಡೆ ಹೇಳುವ ಸಂಗತಿಯೊಂದಿಗೆ ತಾದಾತ್ಮ್ಯ ಪಡೆಯುತ್ತದೆ.

ವಿಶ್ವನಾಥರ ಆಟದ ಕಲಾತ್ಮಕತೆಯನ್ನು ಪ್ರತಿಮೆಗಳ ಸಂಯೋಜನೆಗಳ ಮೂಲಕವೇ ಮೊದಲ ಭಾಗದಲ್ಲಿ ಕಟ್ಟಿಕೊಡಲಾಗುತ್ತದೆ. ಚಿತ್ರಕಲೆ, ಸಂಗೀತ ಮತ್ತು ಕ್ರೀಡೆಗೆ ಸಂಭಂಧಿಸಿದ ಪ್ರತಿಮೆಗಳು ಅಲ್ಲಿ ತಳಕು ಹಾಕಿಕೊಳ್ಳುವ ಬಗೆ ರೋಚಕವಾಗಿದೆ. ಮೊದಲ ಸಾಲುಗಳಲ್ಲಿ ಪ್ರಿಯವಾದ ಆಕ್ರಮಣದೊಂದಿಗೆ ಆ ಪ್ರತಿಯ ನಿರ್ಮಾಣವನ್ನು ಯೋಜಿಸಲಾಗಿದೆ. ಈ ಪ್ರತಿಮೆಗಳಲ್ಲಿ ಕಾಣುವ ಆಟದ ಏಕಾಗ್ರತೆಯ ಮತ್ತು ಅಂತರ್ಮುಖತೆಯ ನಿಲುವುಗಳು ಒಟ್ಟು ಗ್ರಹಿಕೆಯನ್ನು ಸಂಪದ್ಭರಿತಗೊಳಿಸುತ್ತದೆ.

ಬಿಟ್ಟ ಕಣ್ಣು ನೆಟ್ಟ ನೋಟ ಹಿಗ್ಗಲಿಸಿದ ರೆಪ್ಪೆ

ನಿಶ್ಯಬ್ಧ ಸಿಡಿದ ಗುಂಡು ಕುಸಿದು ಬಿತ್ತೆ ಕೋಟೆ?

ಹೊಳೆದ ಮಿಂಚು ಸುಳಿದ ನಗೆ ವಾಹ್‌ವಾ! ಚಪ್ಪಾಳೆ

ಆಡಿದಂತೆ ಕುಶಲಕುಂಚ ಪಟ್ಟಿಕದಲ್ಲಿ ಕಿರಣ

ಕಲುಕು ನೀಲಿ ಬಳುಕು ಪಚ್ಚೆ ಕೊನೆಯುವ ತೆನೆ ಚಿನ್ನ

ಹಿತ ಗುಲಾಬಿ ಸ್ಪರ್ಶ ಪುಳಕ ತುಳುಕು ಪ್ರೇಮಗಾನ

ಇದು ಮೊದಲ ಘಟ್ಟ, ಪ್ರತಿಭೆಯ ಮಂತ್ರದಂಡ ಕೈ ಜಾರಿದ ದುರಂತದ ಘಟ್ಟ ಎರಡನೆಯದು. ಬೊಜ್ಜು, ಪ್ರಸಿದ್ಧಿ, ಕುಗ್ಗುವ ಇಂದ್ರಿಯ ಪಾಟವ, ಪರಿಶ್ರಮದಿಂದ ಮೊಂಡುತನದಿಂದ ಹಿಂದಿನ ಪ್ರತಿಭೆಯನ್ನು ಗೆಲ್ಲುವ ಯತ್ನ, ಆಗ ಉಂಟಾಗುವ ಸೋಲಿನಿಂದ ಪಡಬೇಕಾಗುವ ಯಾತನೆ ಈ ಎಲ್ಲವೂ ಎರಡನೇ ಘಟ್ಟದಲ್ಲಿ ಮತ್ತೆ ಸೂಕ್ತ ಪ್ರತಿಮೆಗಳಾಗಿ ಮೈದಾಳುತ್ತವೆ. ಮೊದಲ ಭಾಗದಲ್ಲಿ ಬರುವ ಈ ಪ್ರತಿಮೆಗಳು ಪರಿವರ್ತನೆಯ ದುರಂತವನ್ನು ಕನಿಕರ ಬರುವಂತೆ ನಟಿಸತೊಡಗುತ್ತವೆ. ಮತ್ತೆ ಅದೇ ಸಂಗೀತ, ಅದೇ ಚಿತ್ರ ಅದೇ ನರ್ತನ ಸ್ಥೂಲದಿಸೆಗೆ ಬಂದು ಜಡಗೊಳ್ಳುತ್ತಾ ಹೋಗುವುದು ಅನುಕಂಪೆಯನ್ನು ಕಡೆಯುತ್ತದೆ.

ಪಂಚತಾರಾ ಮಂಚದಲ್ಲಿ ಏದುಸುರಿನ ಬೊಜ್ಜು

ರೇಡಿಯೋ ಟೀವಿ ಪತ್ರಿಕೆ ಸಾಲು ನಿಂತು ನಜ್ಜು

ಪೋಸುಗಳ ಗಮ್ಮತ್ತಿನಲ್ಲಿ ಮುಗ್ಧ ನಜ್ಜುಗುಜ್ಜು

ಗೊಮ್ಮಟ ದುಪ್ಪಟ್ಟು ಕಟೌಟ್ ಕ್ಯಾಲೆಂಡರ್ ನಟಿ

ಯಾಹೂ ಲುಬಲುಬ ಡಿಸ್ಕೋ ಗಣಕ ಗಾನ ರತಿ

ಹೊಸೆಯುವ ಮೈಯೆಸೆಯುವ ತತ್ತರಿಸುವ ಕ್ಯಾಬರಿ

ನಾದ ಗೆಜ್ಜೆ ಕುಂಜ ಉಳಿ ಬಂದಳಿಕೆಯ ತೀಟೆ

ಹಸಿವೆಗೆ ಅಳುನಾದ, ಗೆಜ್ಜೆ ಸೂಳೆಯ ಹುಸಿಲೆಜ್ಜೆ

ಕನ್ನಕೆ ಉಳಿ, ಚೂರಿ ಕುಂಚ, ಹಚ್ಚೆ ಕೆಂಪು ನಕ್ಷೆ

ಮೂರನೆಯ ಘಟ್ಟದಲ್ಲಿ ಒಮ್ಮೆಗೆ ಕಲಾವಿದನ ಭೂತ ಮತ್ತು ಕಲೆಯ ಭವಿಷ್ಯ ಎರಡನ್ನೂ ಧ್ವನಿಸುವಂತೆ ಮಾಡಲಾಗಿದೆ. ಒಂದು ಸಾಮಾನ್ಯ ವಾತಾವರಣದಿಂದ ಒಬ್ಬ ಕಲಾವಿದ ಅವತರಿಸಿದನಲ್ಲ ಎಂಬುದು ಒಂದು ನೆರೆ. ಈ ಕಲಾವಿದ ಮುಗಿದನಲ್ಲ? ಆದರೆ ಮುಗಿದನೆ? ಇವನದೇ ಸ್ಫೂರ್ತಿ ಇನ್ನೊಂದು ಪಲನೆಯಂಗಳದಲ್ಲಿ ಇನ್ನೊಬ್ಬ ಬಾಲಕಲಾವಿದನನ್ನು ಹುಟ್ಟು ಹಾಕುತ್ತಿಲ್ಲವೆ? ಹೀಗೆ ಕಲೆ ನಿರಂತರವಾದುದೆಂದೇ ನಾವು ಸಾಂತ್ವನ ಪಡೆಯಬೇಕೆ? ನಿರಂತರವಾದ ಕಲೆಯನ್ನು ಕೈಯಿಂದ ಕೈಯಿಗೆ ದಾಟಿಸುವುದಷ್ಟೆ ಶತಮಾನಗಳಿಂದ ಕಲಾವಿದರು ವಹಿಸುತ್ತಾ ಬಂದಿರುವ ಪಾತ್ರವೆ?

ಜೋಪಡಿಯಲಿ ಜೋಗುಳ ಅಂಗಳದಲಿ ಹೂಹಸೆ

ಚಿಂದಿಯಲ್ಲಿ ಹಿಗ್ಗು ಹರೆಯ ಉಬ್ಬು ನಿಗುರು ಸೊನೆ

ಹುಟ್ಟಿಯಲ್ಲಿ ಗಬ್ಬ ಹಬ್ಬ ಅಜ್ಜ ಮೂಗು ನಗೆ

ಶಾಲೆ ದೊಡ್ಡಿ ಮಂಪರಲ್ಲಿ ಚೊಪ್ಪಗಣ್ಣ ಹಸುಳೆ

ಬಚ್ಚಲಲ್ಲಿ ಬಾಲಮುರಳಿ ಸಂತೆಯಲ್ಲಿ ಬೇಂದ್ರೆ

ಹಿತ್ತಿಲಲ್ಲಿ ಕ್ರಿಕೆಟ್ ಛಿದ್ರ ಹೆಂಚು ಊದುಗೆನ್ನೆ

ಅಂಡಾಣು ಪ್ರತಿಭೆ, ಲಕ್ಷ ವೀರ್ಯಾಣು ಪರಿಶ್ರಮ

ಹುಟ್ಟಿದ ಕರೆ ವಾಮನ ಬೆಳೆ ಬೆಳೆದಂತೆ ತ್ರಿವಿಕ್ರಮ

What Shot! What grace! ವಿಸ್ಮಯ ಖುಷಿ ಸಂಭ್ರಮ

ಕೊನೆಯ ಘಟ್ಟ ಮೂರೇ ಸಾಲುಗಳಿದ್ದು, ಇಲ್ಲಿ ವಿಶ್ವನಾಥರೊಂದಿಗೆ ಕವಿ ಸಹಾನುಭೂತಿ ವ್ಯಕ್ತಪಡಿಸುವಲ್ಲಿ ಕವಿತೆಯನ್ನು ವೈಯಕ್ತಿಕ ನೆಲೆಯಿಂದ ವಿಶಾಲ ಬದುಕಿನ ನೆಲೆಗೆ ಬಿಡಿಸಿಕೊಳ್ಳಲು ಸಾಧ್ಯವಾಗುತ್ತದೆ. ವ್ಯಕ್ತಿಯನ್ನು ಹೀಗೆ ಸಾರ್ವತ್ರಿಕ ಅರ್ಥ ನೀಡಬಲ್ಲ ಪ್ರತಿಮೆಯಾಗಿ ರೂಪಾಂತರಿಸಿದಾಗ ಮಾತ್ರ ವ್ಯಕ್ತಿ ಚಿತ್ರ ಕಾವ್ಯವಾಗಿ ಸಫಲವಾಗುವುದಷ್ಟೆ?

ವೈಭವಗಳ ಹಂಪೆಯಲ್ಲಿ ಅಂಡಲೆಯುವ ಭೂತ

ಸವೆದ ಸ್ಪರ್ಶಮಣಿ ಕಂಟ ಕುಂಚ ಉಳಿ ಅನಾಥ

ಕೃತಜ್ಞತೆ, ಸಹಾನುಭೂತಿ, ಗೆಳೆಯ ವಿಶ್ವನಾಥ

ಇದು ಲಕ್ಷ್ಮಣರಾಯರ ಪ್ರತಿಮೆ ಮಾರ್ಗದಲ್ಲಿ ಮಾಡಿದ ಅತ್ಯುತ್ತಮ ಕೃತಿಯೆಂಬುದು ನಾವು ಈ ಅಧ್ಯಯನದಿಂದ ಭಾವಿಸಬಹುದು. 'ವಾ-ನರಗೀತೆ' 'ಸಂವಾದ' 'ಟುವಟಾರ'ಗಳ ಮಹಾತ್ವಾಕಾಂಕ್ಷೆ ಇಲ್ಲಿ ಇರದಿರಬಹುದು. ಆದರೆ ಇಲ್ಲಿ ಕಾಣುವ ಸ್ವಂತವಾದ ಏರುವಿಕೆ ಮಹತ್ವದ್ದು. ನಮ್ಮ ಈ ಅಧ್ಯಯನದಲ್ಲಿ ಜಿಆರ್‌ಎಲ್ ರವರ ಗುಂಡಪ್ಪ ವಿಶ್ವನಾಥ್, ದೇವರಿಗೆ ನಮಸ್ಕಾರ ಮುಂತಾದ ಎಲ್ಲರಿಗೂ ನೆನಪಿನಲ್ಲುಳಿಯುವ ಹಲವು ವಿಶಿಷ್ಟ ಜಿಡಿ ಕವಿತೆಗಳನ್ನು ನಮ್ಮ ಅಧ್ಯಯನದಲ್ಲಿ ಅಳವಡಿಸಿಕೊಂಡಿದ್ದೇವೆ.

---

೨೫) ಕೆ.ವಿ.ತಿರುಮಲೇಶ್ "ಕೊಲಂಬಸ್" (ಮುನ್ನುಡಿ)

ಅಧ್ಯಾಯ – ೪

ಅಡಿ ಟಿಪ್ಪಣಿ

೧. "ಜೀವಜಲ" ಸಮಗ್ರಕಾವ್ಯ
ಬಿ.ಆರ್.ಲಕ್ಷ್ಮಣರಾವ್, ಸಪ್ನ ಬುಕ್‌ಹೌಸ್, ಬೆಂಗಳೂರು – ೨೦೧೧
ಪುಟ ಸಂಖ್ಯೆ ೭೬೩.

೨. ಸುಬ್ಬಾ ಭಟ್ಟರ ಮಗಳೇ ಭಾವಗೀತೆಗಳೂ
ಬಿ.ಆರ್. ಲಕ್ಷ್ಮಣರಾವ್, ಪ್ರಕಾಶಕರು ಅಂಕಿತಪುಸ್ತಕ
ಬೆಂಗಳೂರು –೨೦೦೫

೩. ಸಖೀಗೀತ – ದ.ರಾ.ಬೇಂದ್ರೆ

೪. ಮೈಸೂರು ಮಲ್ಲಿಗೆ
ಕೆ.ಎಸ್.ನರಸಿಂಹಸ್ವಾಮಿ

## ಅಧ್ಯಾಯ-೫

## ಬಿ.ಆರ್.ಲಕ್ಷ್ಮಣರಾವ್‌ರವರ ಭಾವಗೀತೆಗಳಲ್ಲಿ ಸ್ತ್ರೀ ಚಿತ್ರಣ

ಭಾವಗೀತೆ ಆಧುನಿಕ ಕಾವ್ಯ ಸಂದರ್ಭದಲ್ಲಿ ರೂಪುಗೊಂಡ ಪ್ರಕಾರ ಲಿರಿಕ್‌ಗೆ ಸಂವಾದಿಯಾದಂಥದು ಎಂಬುದು ನಮಗೆ ಪರಿಚಿತ ಸಂಗತಿಯಾದರೂ ಭಾವಗೀತೆಯ ಎಳೆಗಳನ್ನು ನಾವು ನಮ್ಮ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಗುರುತಿಸಬಹುದಾಗಿದೆ. ವಚನ ಸಾಹಿತ್ಯ ಹಾಗೂ ಕೀರ್ತನ ಸಾಹಿತ್ಯದಲ್ಲಿ ಭಾವಗೀತೆಗೆ ಅತ್ಯುತ್ತಮ ನಿದರ್ಶನಗಳಿವೆ. ಹರಿಹರನ ರಗಳೆಯ ಕೆಲವು ಭಾಗಗಳು ನಮಗಿಲ್ಲಿ ನೆನಪಾಗುತ್ತಿವೆ. ಎಲ್ಲಕ್ಕಿಂತ ಮುಖ್ಯವಾಗಿ ರತ್ನಾಕರವರ್ಣಿ ಕಬ್ಬಿಗರೋದುಗಬ್ಬವ ಹಾಡುಗಬ್ಬವ ಕಬ್ಬದೊಳೆರವರು ಎಂದು ಸ್ಪಷ್ಟವಾಗಿ ಆ ಕಾಲಕ್ಕೆ ಕಾವ್ಯದಲ್ಲಿ ಎರಡು ಪ್ರಕಾರಗಳನ್ನು ಹೇಳುತ್ತಾನೆ. ಓದುಗಬ್ಬ, ಹಾಡುಗಬ್ಬ ಎಂದು ಆತ ಹೇಳಿರುವ ಈ ಎರಡು ಬಗೆಗಳಲ್ಲಿ ಹಾಡುಗಬ್ಬದ ಸ್ವರೂಪದ ಬಗ್ಗೆ ನಾವು ಚಿಂತಿಸಬೇಕಿದೆ. ಆತ ಹೇಳುವ ಓದುಗಬ್ಬ ಮಾರ್ಗ ಕಾವ್ಯಪರಂಪರೆ; ಹಾಡುಗಬ್ಬ ದೇಸಿ ಕಾವ್ಯಮಾರ್ಗ. ಮಾರ್ಗ ಪಂಡಿತ ಪರಂಪರೆಗೆ ಪ್ರಿಯವಾದ ಪ್ರೌಢಕಾವ್ಯ; ದೇಸಿ ಜನಸಾಮಾನ್ಯರಿಗೆ ಹತ್ತಿರವಾದಂಥದು, ಮಾರ್ಗಕಾವ್ಯದಂತೆ ಪೆಡಸಾದುದಲ್ಲ.

ಈ ಹಾಡುವ ಕಾವ್ಯ ಪರಂಪರೆಯ ಬಗ್ಗೆ ಮಾರ್ಗ ಪರಂಪರೆಗೆ ಸೇರಿದ ಶುದ್ಧಕಾವ್ಯದ ಆರಾಧಕರು ಮೊದಲಿನಿಂದಲೂ ತಕರಾರು ಎತ್ತಿದರೂ ಈ ಪರಂಪರೆ ಅವ್ಯಾಹತವಾಗಿ ಬೆಳೆದು ಬಂದಿದೆ. ಜನಪ್ರೀತಿ ಗಳಿಸಿದೆ. ಈ ದೇಸಿ ಪರಂಪರೆಯ ಮುಂದುವರಿಕೆಯಾಗಿ ನಾವು ಆಧುನಿಕ ಭಾವಗೀತೆಯನ್ನು ಗುರುತಿಸಿಕೊಳ್ಳುಲು ಸಾಧ್ಯವಿದೆ.

'ಹಾಡುವ ಕಾವ್ಯ'ದ ಪ್ರಧಾನ ಗುಣ ಸರಳತೆ, ಸರಳತೆಯನ್ನು ಗಹನದ ಪ್ರೇಮ ಗಂಭೀರವಾದುದನ್ನು ಒಳಗೊಳ್ಳಲಾರದ್ದು ಎಂಬ ನೆಲೆಯಲ್ಲಿ ವ್ಯಾಖ್ಯಾನಿಸುತ್ತಾನೆ. ಗಂಭೀರವಾಗಿಯೂ, ಸಂಕೀರ್ಣವಾದುದನ್ನು ಒಳಗೊಂಡು ಸರಳವಾಗಿರುವುದು ಸಾಧ್ಯ-ಗಾಂಧಿಯಂತೆ. ಆದರೆ ಅದು ಸಹಜವಲ್ಲ ಸುಲಭವಲ್ಲ ಕನ್ನಡದಲ್ಲಿ ಅತ್ಯುತ್ತಮ 'ಹಾಡುವ ಕಾವ್ಯ'ವೆಲ್ಲವೂ ಇಂತಹ ಪ್ರಯತ್ನ ಮಾಡಿದೆ. ಕಳಪೆ ರಚನೆಗಳ ಬಗ್ಗೆ ನಾವಿಲ್ಲಿ ಚರ್ಚಿಸುವ ಅಗತ್ಯವಿಲ್ಲ. ಎಲ್ಲ ಪ್ರಕಾರಗಳಲ್ಲೂ ಗಬ್ಬೆಬ್ಬಿಸುವ ನಕಲಿ ಪ್ರತಿಭೆಗಳು ಎಲ್ಲ ಕಡೆಯೂ ಕಾಣಿಸುತ್ತವೆ. ಆದರೆ ಪ್ರತಿಭಾವಂತರು ಪ್ರಕಾರದ ಸಾಧ್ಯತೆಗಳನ್ನು ಅರ್ಥಪೂರ್ಣಗೊಳಿಸಿಕೊಳ್ಳುವ ಗಂಭೀರ ಪ್ರಯತ್ನ ಮಾಡುತ್ತಲೇ ಇರುತ್ತಾರೆ. ಲಕ್ಷ್ಮಣರಾವ್ ನಮ್ಮ ಅತ್ಯುತ್ತಮ ಪ್ರತಿಭೆಗಳ ಅಂತಹ ಪ್ರಯತ್ನವನ್ನು ಸಮರ್ಥವಾಗಿ ಮುಂದುವರಿಸಿದ್ದಾರೆ. ಕನ್ನಡಕ್ಕೆ ವಿಶಿಷ್ಟವೆನ್ನಬಹುದಾದ ಭಾವಗೀತೆಗಳನ್ನು ನೀಡಿದ್ದಾರೆ.

ಸಾಮಾನ್ಯವಾಗಿ ಗೀತೆಗಳಿಗೆ ಭಾವ ಜಗತ್ತೇ ಕೇಂದ್ರ. ಹೀಗಾಗಿಯೇ ರಮ್ಯತೆ ಅದರ ಲಯವನ್ನು ರೂಪಿಸುತ್ತದೆ. ಲಕ್ಷ್ಮಣರಾವ್ ಅವರಿಗೆ ಇದರ ಅರಿವಿದೆ. ಆದ್ದರಿಂದಲೇ ಎಚ್ಚರದಿಂದಲೇ ಗೀತ ಜಗತ್ತು ವಿಸ್ತಾರಗೊಳಿಸುವ, ದೈನಿಕದ ಕೋಟಲೆಗಳನ್ನೂ ಅದು ಒಳಗೊಳ್ಳುವಂತೆ ಮಾಡುವ ಪ್ರಯತ್ನವನ್ನು ಅವರು ತಮ್ಮ ಗೀತೆಗಳಲ್ಲಿ ಮಾಡಿದ್ದಾರೆ.

ಅಳುವ ಮಕ್ಕಳ ಹಾಡಿ ತೂಗೀತೆ?

ದಣಿದ ಒಕ್ಕಲ ಬಳಿಗೆ ಕೂಗೀತೆ?

ನೋವುಗಳ ಸಂತೈಸಿ ನೀಗೀತೆ

ನನ್ನ ಗೀತೆ?

ಅಸಹಾಯಕರಿಗಾಗಿ ಮರುಗೀತೆ?
ದುರುಳರಿಗೆ ಕೆಚ್ಚಿಂದ ಎರಗೀತೆ?
ಮುರಿದರೂ ಕಂಗೆಡದೆ ಮಿರುಗೀತೆ
ನನ್ನ ಗೀತೆ?

ಸಂಸಾರಿಗಳ ಜೊತೆ ಏಗೀತೆ?
ಬೈರಾಗಿಗಳ ಕೂಡಿ ಮಾಗೀತೆ?
ತನ್ನದೇ ಪಥ ಹಿಡಿದು ಸಾಗೀತೆ?
ನನ್ನ ಗೀತೆ?

ಇದು ಲಕ್ಷ್ಮಣರಾವ್ ಹಂಬಲ ಗೀತ ಜಗತ್ತಿನಲ್ಲಿ ಅವರು ಸಾಧಿಸಿ ಬಯಸುವ ಆಶಯ. ಬಿ.ಆರ್.ಎಲ್ ನವ್ಯ ಕಾವ್ಯ ಸಂದರ್ಭದಲ್ಲಿ ಕಾವ್ಯ ಜಗತ್ತನ್ನು ಪ್ರವೇಶಿಸಿದಂಥವರು. ಆದರೆ ನವ್ಯ ಸಿನಿಕತನ, ಹತಾಶೆ, ಅನಾಥಪ್ರಜ್ಞೆ ಅವರನ್ನು ಕಾಡಿಲ್ಲ. ಬದಲಾಗಿ ಬದುಕಿನ ಉತ್ಕಟ ಪ್ರೀತಿ, ನಂಬಿಕೆ, ಸಮುದಾಯದೊಂದಿಗೆ ಒಂದಾಗುವ ಅಭೀಪ್ಸೆ ಅವರಲ್ಲಿ ದಟ್ಟವಾಗಿ ಕಾಣಿಸುತ್ತವೆ. ನವ್ಯದ ಪ್ರಭಾವದ ಪ್ರಭೆಯಿಂದಾಗಿ ರಮ್ಯ ಕಾವ್ಯ ಮಾರ್ಗಕ್ಕೆ ಸಹಜವಾಗಿದ್ದ ಕನಸುಗಾರಿಕೆ, ಆದರ್ಶ ಇವುಗಳಿಂದಲೂ ಲಕ್ಷ್ಮಣರಾವ್ ದೂರವಾಗಲು ಸಾಧ್ಯವಾಯಿತು. ಕಟುವಾಸ್ತವ ಪ್ರಜ್ಞೆ ಸಮಕಾಲೀನ ಸಾಮಾಜಿಕ ಸವಾಲುಗಳ ಅರಿವು ಅವರ ಗೀತೆಗಳ ಸ್ವರೂಪವನ್ನು ರೂಪಿಸಿವೆ. ಹೀಗಾಗಿಯೇ ನವ್ಯ ನವೋದಯ ಎರಡೂ ಮಾರ್ಗಗಳಿಗಿಂತ ಭಿನ್ನ ರೀತಿಯ ಕಾವ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ಅವರಿಗೆ ಸಾಧ್ಯವಾಯಿತು.

ಈ ಹಿನ್ನಲೆಯಲ್ಲಿ ತಮ್ಮದೇ ಆದ ರೀತಿಯ ಕಾವ್ಯರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು ಅವರಿಗೆ ಸಾಧ್ಯವಾಯಿತು. ಈ ಹಿನ್ನಲೆಯಲ್ಲಿ ತನ್ನದೇ ಆದ ರೀತಿಯ ಭಿನ್ನ ಬಗೆಯ ಭಾವಗೀತೆಗಳನ್ನು ರಚಿಸುವುದರ ಮೂಲಕ ಲಕ್ಷ್ಮಣರಾವ್ ಹಾಡುವ ಕಾವ್ಯ ಪರಂಪರೆಯಲ್ಲಿಯೂ ವಿಶಿಷ್ಟ ದನಿಯಾಗಿ ನಮಗೆ ಕಾಣಿಸುತ್ತಾರೆ. ಲಕ್ಷ್ಮಣರಾವ್ ಅವರ ಸಮಗ್ರ ಗೀತ ಸಾಹಿತ್ಯವನ್ನು ಗಮನಿಸಿದಾಗ ಕಂಡು ಬರುವ ಪ್ರಧಾನ ಕಾಳಜಿ–

---

೨೬) ಡಾ.ನರಹಳ್ಳಿ ಬಾಲಸುಬ್ರಹ್ಮಣ್ಯ "ಸುಬ್ಬಾಭಟ್ಟರ ಮಗಳೇ" (ಮುನ್ನುಡಿ)

ಸುರಿಯಲಿ ಕಂಪೆರೆಯಲಿ

ಜೀವನ ಪ್ರೀತಿಯ ಮಳೆ;

ಹರಿಯಲಿ ಭೋರ್ಗರೆಯಲಿ

ಬತ್ತಿದೆದೆಗಳ ಹೊಳೆ;

ಕೊಚ್ಚಿ ಹೋಗಲಿ ಸ್ವಾರ್ಥ ದುರಾಸೆ;

ಸ್ವಚ್ಛವಾಗಲಿ ಇಳೆ

ಇದು ಸಂಪ್ರದಾಯವಾದಿಯ ರೀತಿಯ ಉಪದೇಶವೋ ಆಗಿದೆ. ರಮ್ಯ ಮನಸ್ಥಿತಿಯ ಹಳಹಳಿಕೆಯ ದನಿಯೂ ಆಗದೆ, ಸಾಮಾನ್ಯ ಜನರ ಅಭೀಪ್ಸೆಯ ಪ್ರತಿನಿಧಿಯಾಗಿ ಲಕ್ಷ್ಮಣರಾವ್ ಮಾತನಾಡುವಲ್ಲಿ ಅವರ ಯಶಸ್ಸಿದೆ. ಕೆ.ಎಸ್.ನರಸಿಂಹಸ್ವಾಮಿಯವರಂತೆ ಬಿ.ಆರ್.ಎಲ್ ಸಹ ಮಧ್ಯಮವರ್ಗದ ಅಂತರಂಗದ ದನಿಯಾಗಿ ಕಾಣಿಸಿದರೂ ಕೆ.ಎಸ್‌ನರಿಗಿಂತ ಲಕ್ಷ್ಮಣರಾವ್ ಸಂಪೂರ್ಣ ಭಿನ್ನ. ಕೆಎಸ್‌ನ ಅವರಲ್ಲಿ ವಿಷಾದವಿದೆ. ಒಪ್ಪಿ ಸ್ವೀಕರಿಸುವ ಸಮಾಧಾನದ ನಿಲುವಿದೆ; ಲಕ್ಷ್ಮಣರಾವ್ ಅವರಲ್ಲಿ ಸೂಕ್ಷ್ಮ ವ್ಯಂಗ್ಯವಿದೆ. ತೆಳು ಹಾಸ್ಯದ ಲೇವಡಿಯಿದೆ. 'ಸುಬ್ಬಾಭಟ್ಟರ ಮಗಳೇ' ಅಂತಹ ಗೀತೆ ಇದಕ್ಕೆ ಅತ್ಯುತ್ತಮ ನಿದರ್ಶನ ಸಂಧಾನ, ಅಗ್ನಿಗೆ, ಬೇರು, ಕಾಮಧೇನು, ಮೂಢನಂಬಿಕೆ, ಸ್ವಾತಂತ್ರ್ಯ, ಮಹಿಮೆ, ಗುಮ್ಮ, ಬೇಸಿಗೆ ಮಾಯಾದೀಪ, ಕಾಲ, ಅಮ್ಮ, ತನ್ನ ಗೆಳೆಯರು, ವಿಷಾದ ಸಹನೆ ಮರವಾಗು. ಮೊದಲಾದ ಗೀತೆಗಳಲ್ಲಿ ನಾವು ಕಾಣುವ ವೈವಿಧ್ಯ ವಿಸ್ತಾರ ಲಕ್ಷ್ಮಣರಾವ್ ಗೀತೆ ಜಗತ್ತು ಒಳಗೊಳ್ಳುವ ಅನುಭವ ಪ್ರಪಂಚದ ವ್ಯಾಪ್ತಿಯನ್ನು ಸೂಚಿಸುತ್ತದೆ.

ಇದೇ ಬಗೆಯ ವಿಸ್ತಾರ, ವೈವಿಧ್ಯವನ್ನು ನಾವು ಲಕ್ಷ್ಮಣರಾವ್ ಅವರಿಗೆ ಪ್ರಿಯವಾದ ಅವರ ಪ್ರೇಮಗೀತೆಗಳಲ್ಲೂ ಕಾಣುತ್ತೇವೆ. ಪ್ರೀತಿಯ ಉತ್ಕಟತೆಯಲ್ಲಿಯೇ ಅಗಲಿಕೆ, ವಿರಹ, ಭಗ್ನತೆ ಹದಿಹರಯದ ಮೋಹ. ಈ ಭಾವಗಳೂ ಅವರಲ್ಲಿ ಅದರ ಎಲ್ಲ ವರ್ಣಸೂಕ್ಷ್ಮಗಳೊಂದಿಗೆ ಕಾಣಿಸಿಕೊಳ್ಳುತ್ತದೆ. ಮನುಷ್ಯ ಸಂಬಂಧಗಳಲ್ಲಿ ಹೆಚ್ಚು ದಟ್ಟವಾಗಿ ಕಾಡುವ ಗಂಡು-ಹೆಣ್ಣಿನ ಸಂಬಂಧದ ಜಟಿಲತೆಗಳನ್ನು ಉಲ್ಲಾಸ ವಿಷಾದಗಳನ್ನು ಲಕ್ಷ್ಮಣರಾವ್ ನಮ್ಮ ಮನಸ್ಸನ್ನು ಕಾಡುವ ಹಾಗೆ ಹಾಡಿದ್ದಾರೆ.

ತಮ್ಮ ಚೇತೋಹಾರಿ ನವ್ಯ ಕವಿತೆಗಳಿಂದ ಜನಪ್ರೀತಿ ಗಳಿಸಿದ್ದ ಬಿ.ಆರ್.ಲಕ್ಷ್ಮಣರಾವ್ ತಮ್ಮ ಹೃದಯ ಸ್ಪರ್ಶಿ ನವ್ಯಭಾವಗೀತೆಗಳಿಂದ ಜನಪ್ರಿಯತೆಯನ್ನೂ ಸೂರೆ ಮಾಡಿದ್ದಾರೆ. ಕವಿತೆ ಇರಲಿ, ಗೀತೆ ಇರಲಿ ನವ್ಯತೆ ಬಿ.ಆರ್.ಎಲ್ ರಚನೆಯ ಪ್ರಧಾನ ಭೂಮಿಕೆಯಾಗಿದೆ. ಇದು ಅತ್ಯಂತ ಮುಖ್ಯ ಅಂಶವೂ ಹೌದು.

ಭಾವಗೀತೆಯಲ್ಲಿ ನವ್ಯತೆಯನ್ನು ತರುವುದು ಸವಾಲಿನ ಕೆಲಸ ಗೀತೆಯಿಂದ ಕೂಡಲೇ ಅದು ಸಹಜವಾಗಿಯೇ ರಮ್ಯತೆಗೆ ಜೋತು ಬೀಳುತ್ತದೆ. ಆದರೆ ಬಿ.ಆರ್.ಎಲ್ ಗೀತೆಗಳು ಕಠೋರವಾದ ವಾಸ್ತವದ ಅರಿವಿನಲ್ಲಿ ಹುಟ್ಟುವುದರಿಂದ ಭಾವ ತೀವ್ರತೆ ಅಲ್ಲಿ ಕಾಣಬಹುದೆ ವಿನಾ ಭಾವಾವೇಶವಲ್ಲ. ಶ್ರುತಿ ಮೀರಿದ ಹಾಡು, ವಿಷಾದ, ನೆನಪು ಮೊದಲಾದ ರಚನೆಗಳನ್ನು ಈ ದೃಷ್ಟಿಯಿಂದ ನೋಡಬೇಕು.

ಲಕ್ಷ್ಮಣರಾವ್ ಗೀತೆಗಳಲ್ಲಿ ಒಂದು ವಿಶೇಷವಿದೆ. ಭಾವದ ಹೊಸ ಉಗಮ ಸ್ಥಾನಗಳನ್ನು ಅವರ ಗೀತೆಗಳು ಬಗೆಯುತ್ತವೆ. ಕಾಲ ಬದಲಾದಂತೆ ಒಂದು ಸಮಾಜದಲ್ಲಿ ಭಾವದ ಉಗಮ ಸ್ಥಾನಗಳೂ ಬೇರೆಯಾಗುತ್ತವೆ. ಎಂಬ ಅರಿವಿನ ಫಲದಿಂದಾಗಿ ಅವರ ನವ್ಯಗೀತೆಗಳಲ್ಲಿ ನವ್ಯತೆ ತಾನೇ ತಾನಾಗಿ ಸಿದ್ಧಿತವಾಗುತ್ತದೆ.

ನವ್ಯ ಭಾವಗೀತೆಗೆ ತುಂಟತನದ, ನವುರು ಹಾಸ್ಯದ ಬೆದೆಯ ತೀಕ್ಷ್ಣತೆಯ ಹೊಸ ಹೊಸ ಎಳೆಗಳನ್ನೂ ಬಿ.ಆರ್.ಎಲ್ ದೊರಕಿಸಿದ್ದಾರೆ. ಆದ್ದರಿಂದಲೇ ನವ್ಯ ಭಾವಗೀತೆಯ ಅತ್ಯಂತ ಪ್ರಾತಿನಿಧಿಕ ಕವಿ ಎಂದು ನಾವು ಕರೆಯಬಹುದು.

---

೨೭) ಎಚ್.ಎಸ್.ವೆಂಕಟೇಶ್ ಮೂರ್ತಿ "ನನ್ನಗೀತೆ" (ಬೆನ್ನುಡಿ)

ಅಧ್ಯಾಯ – ೫

ಅಡಿ ಟಿಪ್ಪಣಿ

೧. "ಜೀವ ಜಲ" ಸಮಗ್ರಕಾವ್ಯ, ಬಿ.ಆರ್.ಲಕ್ಷ್ಮಣರಾವ್ ಸಪ್ನಬುಕ್ ಹೌಸ್,
ಬೆಂಗಳೂರು – ೨೦೧೧

೨. ಕವಿ(ತೆ)ಯ ಕತೆ
ಹಿಂದಿನ ಕಥಾಸಮಯಗಳ ಸಂಕಲನ, ಬಿ.ಆರ್. ಲಕ್ಷ್ಮಣರಾವ್,
ಸಪ್ನ ಬುಕ್ ಹೌಸ್ – ಬೆಂಗಳೂರು –೨೦೧೩

೩. ಸುಬ್ಬಾ ಭಟ್ಟರ ಮಗಳೇ ಭಾವಗೀತೆಗಳೂ
ಬಿ.ಆರ್. ಲಕ್ಷ್ಮಣರಾವ್, ಪ್ರಕಾಶಕರು ಅಂಕಿತಪುಸ್ತಕ
ಬೆಂಗಳೂರು –೨೦೦೫

೪. "ಪಡಿಮಿತ" ಬಿ.ಆರ್.ಲಕ್ಷ್ಮಣರಾವ್.
ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು – ೨೦೧೬

೫. ಹನಿಗವಿತೆಗಳು ಬಿ.ಆರ್. ಲಕ್ಷ್ಮಣರಾವ್
ಅಂಕಿಗ ಪುಸ್ತಕ, ಬೆಂಗಳೂರು – ೨೦೧೪

## ಅಧ್ಯಾಯ – ೬

## ಬಿ.ಆರ್.ಲಕ್ಷ್ಮಣರಾವ್ ಕವನ ಸಂಕಲನಗಳ ಒಟ್ಟು ನೋಟ-ಸಮಾರೋಪ

ಬಿ.ಆರ್.ಲಕ್ಷ್ಮಣರಾವ್‌ರವರ ಮೊದಲ ಕವನ ಸಂಕಲನ ಗೋಪಿ ಮತ್ತು ಗಾಂಡಲೀನ'. ಈ ವನದ ವಸ್ತು ಎಂಥವರಿಗೂ ಹೊಳೆಯುವಂಥಹುದೇ. ಅಷ್ಟೆ ಏಕೆ ಕೆಲವರಿಗೆ ಹೊಳೆಯುವುದು ದೊಂದೇ, ಯಾವಳೋ ಹೆಂಗಸು ಬಟ್ಟೆ ಬಿಚ್ಚಿಕೊಂಡು ಕುಣಿಯುವಾಗ ಲಕ್ಷ್ಮಣರಾವ್ ಹಾಗೂ ಳೆಯರು ಬಾಯಿ ಬಿಟ್ಟುಕೊಂಡು ನೋಡುವ ದೃಶ್ಯ ನಗೆ ತರಿಸುತ್ತದೆ. ಆದರೆ ಲಕ್ಷ್ಮಣರಾವ್ ೋಡುವುದರಲ್ಲಿ ಮುಗ್ಧತೆ ಕಾಣುವುದರಿಂದ – ಅಲ್ಲಿ ಪಟ್ಟ ಆಶ್ಚರ್ಯ, ಲಯ ಎಲ್ಲವೂ ಪದ್ಯದಲ್ಲಿ ಂದಿದೆ. ಗಾಂಡಲೀನ ಇವರಲ್ಲಿ ಕೇವಲ ಲೈಂಗಿಕಾಂಕ್ಷೆ ಕೆರಳಿಸದೆ, ತನ್ನ ಮೈಯಿಂದ ಲಕ್ಷ್ಮಣರಾಯರ ಸಕ್ತಿಯನ್ನು ಕೆರಳಿಸಿದ್ದಾಳೆ. ಮಧ್ಯಮ ವರ್ಗದ ಬ್ರಾಹ್ಮಣ ಹುಡುಗನಿಗೆ ಇದೆಲ್ಲ ಹೊಸದೆಂಬುದು ಳಿಯುತ್ತದೆ. ಆದರೆ ಇತರೇ ಹುಡುಗರಂತೆ ಸಂಪೂರ್ಣ ದಿಗ್ಭ್ರಮೆ ಅಥವಾ ಭಯ ಅನುಭವಿಸದೆ ೖರ್ಯದಿಂದ ನೋಡುತ್ತಿದ್ದರು. ಎಂಬುದು ಮುಖ್ಯವಾಗಿ ತಿಳಿಯುತ್ತದೆ. ಆದ್ದರಿಂದಲೇ ಇವರು ೋಪಿಯ ಒಂದು ಭಾಗವೇ ಆಗಿ, ಆತನಿಗಾದ ಅನುಭವ ಪಾಪಪ್ರಜ್ಞೆ ನೈತಿಕ ನಿಲುವು ದಾಟಿ, ಒಂದು ಅಸಂಬದ್ಧ ನಾಟಕೀಯ ಭಾವನೆ ಕೆರಳಿಸಲು ಕವನ ಶಕ್ತವಾಗಿದೆ ಎನ್ನಬಹುದು.

ಈ ಕವನ ಯಾಕೆ ಚೆನ್ನಾಗಿದೆ ಎಂದು ಹೇಳಬೇಕೆಂದರೆ ಬಟ್ಟೆ ಬಿಚ್ಚುವ ಫ್ಯಾಶನಬಲ್ ಸ್ಥಳದಲ್ಲೂ ಇವರು ಸ್ವಭಾವತಃ ಗೋಪಿಗಿಂತಲೂ ದೊಡ್ಡ ಗಾಂಪನಾಗಿರುತ್ತಾರೆ. Snobbish ನಿಲುವು ತೆಗೆದುಕೊಳ್ಳುವುದಿಲ್ಲ. ಇವರಾಗಿಯೇ ಇಲ್ಲಿ ಉಳಿಯುತ್ತಾರೆ. ಈ ಪದ್ಯದಲ್ಲಿ ನವ್ಯತೆ ಕೇವಲ ನವ್ಯ pose ಆಗದೆ ತನ್ನತನ ತೋರಿದೆ. ಲಕ್ಷ್ಮಣರಾವ್‌ರವರು ಕಾಮುಕರಾಗಿರುವುದು ಸಹಜ ಮತ್ತು ಸುಲಭ. ಇವರ ಬಹುಪಾಲು ಪದ್ಯಗಳು ಕಾಮದ ಬೆನ್ನು ಹತ್ತಿವೆ. ಕೆಲವಂತೂ ಇವರ ತೀಟೆಗಳನ್ನು ಮಾತ್ರ ಹೇಳುತ್ತದೆ. ಪದ್ಯದ ದೃಷ್ಟಿಯಿಂದ, ಹೀಗೆ ಕಾಮವನ್ನೇ ಇವರು ಅವಲಂಬಿಸಿದರೆ, ಇದೇ ಕಾಮವನ್ನು ಮುಂದೆಯೂ ಇಟ್ಟುಕೊಳ್ಳದಿದ್ದರೆ ಪಶ್ಚಾತ್ತಾಪ ಪಡಬೇಕಾಗುತ್ತದೆ. ಹೆಣ್ಣ ನೆರಳಲ್ಲಿ ಇವರ ಕಲ್ಪನೆ ಪುಂಗಿ ಊದುತ್ತದೆ. ಕಾಮ ಕೈ ಕೊಡಲು ಸಾಧ್ಯ. ಎಳೆ ವಯಸ್ಸು ಬಹಳ ದಿನ ಇರುವುದಿಲ್ಲ. ಹುಟ್ಟಿನಿಂದ ಬಂದ ಕುತೂಹಲ ಮತ್ತು ಜೀವನ ಶಕ್ತಿ ಮಾಸುವ ಗುಣ ಪಡೆದಿವೆ. ಚಳಿಗಾಲದಲ್ಲಿ ಬೆಂಕಿಯನ್ನು ಕಾಪಾಡುವಂತೆ ಕಾಪಾಡಬೇಕು. 'ಕಾಮ' ಹಲವು ಟೊಂಗೆ ಪಡೆಯುತ್ತದೆ. 'ಲಿಂಗ' ನಮ್ಮ ಶಿವಭಕ್ತ ನುಡಿಗಣಗಳಲ್ಲಿ ಅರ್ಥ ಪಡೆದಂತೆ ಎನ್ನಬಹುದು.

ಲಕ್ಷ್ಮಣರಾವ್‌ರವರ ಕವನಗಳು ಸಾಮಾಜಿಕವಾಗಿ ನಾವು ಒಪ್ಪಿಕೊಳ್ಳದ ಖಾಸಗಿ ಸತ್ಯಗಳನ್ನು ನಮಗೆ ಕಲಿಸುವ ಇಂಥ ಪದ್ಯಗಳು ನಿಜದ ಚೂಪಾಗಿರುವ ಗುಂಡು ಸೂಜಿಗಳಿದ್ದಂತೆ. ಲಕ್ಷ್ಮಣರಾವ್ ಪ್ರಾರಂಭದ ಕಾವ್ಯದಲ್ಲಿ ಗಂಭೀರವಾದ ಒಳಗುದಿಗಳಿದ್ದವು. ಸಾಮಾನ್ಯವಾಗಿ ಲಕ್ಷ್ಮಣರಾವ್ ಎಂದರೆ ರಂಜಿಸುವ, ಕಚಗುಳಿಯಿಡುವ, ಹೆಣ್ಣಿನ ಸುತ್ತ ಚಿನ್ನಾಟವಾಡುವ ಮಜಗಾರ ಕವಿ ಎಂಬ ಗ್ರಹಿಕೆ ಬೆಳೆದುಬಿಟ್ಟಿದೆ. ಆದರೆ ಖುಷಿ ಕೊಡುವ ಅವರ ಕಾವ್ಯದ ಆಳದಲ್ಲಿ ವಿಷಾದದ ಎಳೆಗಳು ಬಹಳಷ್ಟು ಇದ್ದವು.

೨೮) "ಕನ್ನಡ ಸಾಹಿತ್ಯ ಚರಿತ್ರೆ ರಂ.ಶ್ರೀ.ಮುಗಳಿ".

ರಿಪೋಲಿಗೆ ಹೋದ ಹುಡುಗನಿಗೆ ಸಂತೋಷವಾಗಿ ಗಾಂಡಲೀನಳನ್ನು ನೋಡಿಕೊಂಡು ಬರುವುದು ಆಗುವುದಿಲ್ಲ. ಅಲ್ಲಿ ವೆಂಕಟಲಕ್ಷ್ಮಿ ಮತ್ತು ಪಾಪಪ್ರಜ್ಞೆ ಒಮ್ಮೆಗೇ ಠಕರಾಯಿಸಿ Anti climax ಉಂಟಾಗುತ್ತದೆ. ಶಕೂ ಮತ್ತು ನಾಯಕನ ನಡುವೆ ಹೇಗೆ ಅಪ್ಪನ ಬಂಗಾರದ ಚೌಕಟ್ಟಿನ ಕನ್ನಡಕ ಅಡ್ಡ ಬಂತೋ ಹಾಗೆಯೇ ಕಾವ್ಯಕರ್ಮದ ಪಾಡನ್ನೂ ಹೇಳುತ್ತದೆ. ಕಲೆಯೆಂಬುದು ಕವಿಯ ವೈಯಕ್ತಿಕ ಚಪಲಗಳ ಮೂಲವಸ್ತು ಕೈಜಾರಿತೆಂದು ತಹತಹ ಪಡುವುದಿಲ್ಲ. ಕಲೆ ಹಾಗೂ ಲೌಕಿಕದ ಮೂಲಕ ಅವರಿಗೆ ಸ್ಪಷ್ಟವಾಗಬೇಕಾಗುತ್ತದೆ.

ಲಕ್ಷ್ಮಣರಾವ್‌ರವರ ಎಲ್ಲ ಸಂಗ್ರಹಗಳಲ್ಲಿಯೂ ಅನುವಾದಗಳಿರುವುದು ಕಾವ್ಯದ ಬಗ್ಗೆ ಅವರಿಗಿರುವ ಆರೋಗ್ಯಕರ ಹಸಿವಿನ ಲಕ್ಷಣವಾಗಿದೆ. ಮೂಲತಃ ಕಾಮ ಪ್ರಕೃತಿಯವರಾದ ಲಕ್ಷ್ಮಣರಾವ್ ಅವರ ಹಲವಾರು ಕವಿತೆಗಳ ವಿಷಯ ಕಾಮವೇ ಆಗಿರುವುದು ಆಶ್ಚರ್ಯ ಹುಟ್ಟಿಸುವುದಿಲ್ಲ. "ಹೆಣ್ಣಿನ ಬಗ್ಗೆ ನನಗೆ ಸದಾ ಆಸೆಯ ನಿಬ್ಬೆರಗು ಕಣ್ಣು" ಎಂದು ಅವರೇ ಈ ಸತ್ಯವನ್ನು ಒಪ್ಪಿಕೊಂಡಿದ್ದಾರೆ. ಎಂಬುದನ್ನು ಅಧ್ಯಯನದಿಂದ ತಿಳಿಯಬಹುದು.

ಲಕ್ಷ್ಮಣರಾವ್ ಕವಿತೆಗಳು ಕೆಲವು ಮನಸ್ಸಿಗೆ ಬಂದರೆ, ಕೆಲವು ನಿರ್ದಿಷ್ಟ ಜಾಗಗಳಲ್ಲಿ ಕೂತು ಬಿಡುತ್ತವೆ. ಈ ಕವಿತೆಗಳನ್ನು ಬರೆದ ಕವಿ ನಾಗರಿಕ ಮಧ್ಯಮ ವರ್ಗದ ಮನಸ್ಥಿತಿಯನ್ನು ಪ್ರತಿನಿಧಿಸುತ್ತಾನೆ ಅನ್ನಿಸುತ್ತದೆ. ನವೆಯಾದಾಗ ಕೆರೆದುಕೊಳ್ಳುವ ಸುಖ ಸಿಗುವ ಹಾಗೆ ಒಂದಿಷ್ಟು ಆಲೋಚನೆಯ ಸುಖ ಬೇಕು ಎಂದು ಜನ ಬಯಸುತ್ತಾರಲ್ಲ. ಅವರಿಗೆ ಇಷ್ಟವಾಗುವಂಥ ಕೆರೆದುಕೊಳ್ಳುವ ಉಗುರು ಮಾತ್ರವಾಗಬೇಕೆ ಕವಿತೆ ಅನ್ನುವ ಆತಂಕ ಇವರ ಕವಿತೆಯಲ್ಲಿ ಎಲ್ಲೋ ಸೂಕ್ಷ್ಮವಾಗಿ ಕಾಣುತ್ತದೆ.

ಲಕ್ಷ್ಮಣರಾವ್‌ರವರ ಯಾವ ಕವಿತೆಯೂ ಅರ್ಥದ ತೊಡಕನ್ನು ಹುಟ್ಟಿಸುವುದಿಲ್ಲ. ಮೈ ಹಣ್ಣು ಮುದುಕನಾದರೂ ಮನಸ್ಸು ಒಳಗೆಲ್ಲೋ ಒಂದಿಷ್ಟು ದೋರೆಕಾಯಿಯಾಗೇ ಇರುತ್ತದೇನೋ. ಹಣ್ಣಾಗ ಬಯಸದೇನೋ. ಬಹುಶಃ ಇವರ ಒಂದು ರೀತಿಯ ಲೋಲಿಟಾ ಕವಿತೆಗಳು ಹೂಬಾಣ ತಾಕಿ ಮಂಕಾಗುವ ಹುಡುಗುತನದ ನೆನಪನ್ನು ಮೀಟುವುದರಿಂದ ನೆನಪಿನ ಪೆಪ್ಪರ್‌ಮಿಂಟ್‌ಗಳಾಗಿ ಇಷ್ಟವಾಗುತ್ತವೆ.

ಲಕ್ಷ್ಮಣ್‌ರಾವ್‌ರವರು ಒಂದಿಷ್ಟು ಹಾಡುಗಳನ್ನು ಬರೆದು ಅವು ಕ್ಯಾಸೆಟ್ಟುಗಳ ಮೂಲಕ ಜನಪ್ರಿಯಗೊಂಡ ಕಾರಣಕ್ಕಾಗಿ ಇವರನ್ನು ಕ್ಯಾಸೆಟ್ ಕವಿಗಳೆಂದು ಲೇವಡಿ ಮಾಡಿದರು. ಅದೇನೇ ಇರಲಿ, ಹೀಗೆ ಕ್ಯಾಸೆಟ್ ಕವಿಗಳೆಂದು ಲೇವಡಿಗೆ ಒಳಗಾದ ಕವಿಗಳು ಬರೆದದ್ದು ಕೇವಲ ಹಾಡಗಳನ್ನಷ್ಟೇ ಅಲ್ಲ. ಅವರ ಬರೆದ ಹಾಡುಗಳಲ್ಲಿ ಅನೇಕವು ಉತ್ತಮ ಕಾವ್ಯದ ಪರಿಧಿಗೆ ಸಲ್ಲುತ್ತವೆ.

ಇನ್ನು ಈ ಹಾಡುಗಳಾಚೆ ಅವರು ಬರೆದ ಬೇರೆ ರೀತಿಯ ಕಾವ್ಯ ಸಮೃದ್ಧವಾಗಿದೆ ಮತ್ತು ಆ ಕಾವ್ಯವು ಸಂವಹನದ ಸುಭಗತೆಯನ್ನು ತರುವಂತಹದ್ದಾಗಿದೆ.

ಖುಷಿಯಿಂದ ಗುನುಗುಟ್ಟಿಕೊಳ್ಳಬಹುದಾದ 'ನಾ ಚಿಕ್ಕವನಾಗಿದ್ದಾಗ ಅಪ್ಪ ಹೇಳುತ್ತಿದ್ದರು, ಈ ನಿಂಬೆಯ ಗಿಡದಿಂದೊಂದು ಒಳ್ಳೇ ಪಾಠವ ಕಲೀ ಮಗು, 'ಸುಬ್ಬಾ ಭಟ್ಟರ ಮಗಳೇ, ಇದೆಲ್ಲ ನಂದೇ ತಗೊಳ್ಳೇ', 'ಬಾರೇ ರಾಜಕುಮಾರೀ ನಾವು ಹೋಗೋಣ ಜಂಬೂಸವಾರಿ' ಮುಂತಾದ ಅನೇಕ ಹಾಡುಗಳನ್ನು ಕಟ್ಟಿ ಕನ್ನಡಿಗರ ಕಾವ್ಯ ಸಂವೇದನೆಗೆ ಕಚಗುಳಿಯಿಟ್ಟು ಅದರ ಬಿಗಿಯನ್ನು ಸಡಿಲಿಸಿ ಗೆದ್ದ ಲಕ್ಷ್ಮಣ್‌ರಾವ್ ಸಫಲರಾಗಿದ್ದಾರೆ. ಎಂಬುದು ಇವರ ಕವಿತೆಗಳ ಅಧ್ಯಯನದಿಂದ ತಿಳಿಯುತ್ತದೆ.

ಲಕ್ಷ್ಮಣರಾವ್ ಅವರ ಕಾವ್ಯವು ಇನ್ನೊಂದು ರೀತಿಯಿಂದಲೂ ಸಂವಹನದ ಸುಭಗತೆಯನ್ನು ಸಾಧಿಸುತ್ತದೆ. ಮಧ್ಯಮ ವರ್ಗದ ಜೀವನಧಾರೆಯ ಅನುಭವ ದ್ರವ್ಯವನ್ನು, ವರ್ತಮಾನದ ವಾಸ್ತವವನ್ನು ವಸ್ತುವನ್ನಾಗಿ ಸ್ವೀಕರಿಸುವುದರ ಮೂಲಕ ಸಾಧ್ಯವಾಗುವ ರೀತಿ ಇದು ಇವರ ಕಾವ್ಯ ಮಧ್ಯಮ ವರ್ಗದ ಜೀವನ ದೃಷ್ಟಿಕೋನವನ್ನು ಮತ್ತು ತಾತ್ವಿಕತೆಯನ್ನು ಕಟ್ಟಿಕೊಡುವುದನ್ನು ನೋಡಬಹುದು.

'ಇವಳು ನದಿಯಲ್ಲ' ಸಂಕಲನದ ಕವಿತೆಗಳು ತಮ್ಮ ಸಫಲತೆಯೊಂದಿಗೇ, ಭಾವಗೀತೆಗಳಂತಹ – ಬಿಡಿಗವನಗಳ ಓದಿನ ಅನುಭವ ಕೊಡುತ್ತವೆ ಲಕ್ಷ್ಮಣರಾವ್ ಕವಿತೆಗಳು ನೀಡುವ ಈ ರೀತಿಯ ಅನುಭವಕ್ಕೆ ಕಾರಣ ವರ್ತಮಾನಕ್ಕೆ ಬದ್ಧವಾಗುಳಿಯುವ ನಿಷ್ಠೆ. ಲಕ್ಷ್ಮಣರಾವ್ ಏನನ್ನಾದರೂ ಸಾಕ್ಷಾತ್ಕರಿಸುವುದು ಇವತ್ತಿನಲ್ಲಿ ಮತ್ತು ಮನುಷ್ಯನ ಇಂದಿನ ಬದುಕಿನ ನೆಲೆಯಲ್ಲಿ. ಇವರು ಕಟ್ಟುವ ಪ್ರತಿಮಾ ಸೌಧ ವರ್ತಮಾನದ ಬುನಾದಿಯ ಮೇಲೆ ವರ್ತಮಾನದ ಆವರಣದೊಳಗೆ ಮೂಡಿ ನಿಲ್ಲುವುದಾಗಿದೆ.

'ನೀವು ಹೇಳಿರೇ' ಕವಿತೆಯಲ್ಲಿ ನೀವು ಹೇಳಿರೇ... ಎಂದು ಪ್ರಶ್ನಿಸುವವಳು ಅಕ್ಕ ಮಹಾದೇವಿಯಲ್ಲ. ಈಕೆ ಇವತ್ತಿನ ಒಬ್ಬ ಹುಡುಗಿ ಯಾವುದೋ ಹುಡುಗಿಯಲ್ಲ ರೈತ ಹುಡುಗಿ, ಈ ನಿರ್ದಿಷ್ಟತೆ ಇಲ್ಲಿಗೇ ನಿಲ್ಲುವುದಲ್ಲ. ಆಕೆ ಕೊಳವೆ ಬಾವಿಯಿಂದ ಗಿಡ ಮರಗಳಿಗೆ ನೀರೂಡುತ್ತ ಬೆಳೆದು ನಿಂತ ಹುಡುಗಿ ಮತ್ತು ಆಕೆಯ ತಂದೆಯು ತಾನು ಬೆಳೆದಿದ್ದ ತರಕಾರಿಗಳ ಬೆಲೆ ಕುಸಿದು ಕಂಗಾಲಾಗಿ, ಬೆಳೆದು ನಿಂತ ಮಗಳನ್ನು ನೋಡುವ ಸಂದರ್ಭ. ಅದು ಪುರಾಣವನ್ನು ವರ್ತಮಾನದಲ್ಲಿ ನಾಟಿಸುವ ರೀತಿ. ಲಕ್ಷ್ಮಣರಾವ್ ರೀತಿ ಪರಂಪರೆಯ ಹಂಗಿಲ್ಲದ, ವರ್ತಮಾನದ ಬಿಡಿತ್ವವನ್ನು ನೀಡುತ್ತದೆ.

ಲಕ್ಷ್ಮಣರಾವ್ ಕಾವ್ಯದ ಸೊಗಸು ಇರುವುದು ಅದರ ಜೀವಂತಿಕೆಯಲ್ಲಿ; ಅದರ ಚಿರಯೌವನದಲ್ಲಿ, ಕವಿಗೆ ವಯಸ್ಸಾದರೂ ಅವರ ಕಾವ್ಯಕ್ಕೆ ಮುಪ್ಪು ತಗುಲಬೇಕಿಲ್ಲ ಇಡೀ ಸಂಕಲನದ ಎಲ್ಲ ಕವಿತೆಗಳೂ ಜೀವಂತಿಕೆಯಿಂದ ಮಿಡಿಯುತ್ತಿದ್ದು ಅವು ತಮ್ಮ ತಮ್ಮ ವೈಯಕ್ತಿಕ ವಯೋಮಾನವನ್ನು ಬಿಂಬಿಸುತ್ತ ಆಯಾ ವಯೋಮಾನಕ್ಕೆ ತಕ್ಕುದಾದ ಮುಗ್ಧತೆ ಮತ್ತು ತಿಳುವಳಿಕೆಗಳನ್ನು ಬಿಂಬಿಸುತ್ತವೆ. ಆದ್ದರಿಂದಲೇ ಈ ಕವಿತೆಗಳ ಅಧ್ಯಯನ ನಮ್ಮನ್ನು ಅವುಗಳ ಮುಗ್ಧತೆ, ತಿಳುವಳಿಕೆಗಳ ಸ್ನಿಗ್ಧತೆಯಲ್ಲಿ ಅದ್ದುತ್ತವೆ. ನಮ್ಮ ಕಾವ್ಯ ಸಂವೇದನೆಯ ಜೀವಂತಿಕೆಯನ್ನು ವರ್ಧಿಸುತ್ತವೆ.

ಸಾಮಾನ್ಯವಾಗಿ 'ಗೀತೆ'ಗಳಿಗೆ ಭಾವಜಗತ್ತೇ ಕೇಂದ್ರ, ಹೀಗಾಗಿಯೇ ರಮ್ಯತೆ ಅದರ ಲಯವನ್ನು ರೂಪಿಸುತ್ತದೆ. ಲಕ್ಷ್ಮಣರಾವ್‌ರವರಿಗೆ ಇದರ ಅರಿವಿದೆ ಆದ್ದರಿಂದಲೇ ಎಚ್ಚರದಿಂದಲೇ ಗೀತ ಜಗತ್ತು ವಿಸ್ತಾರಗೊಳಿಸುವ, ದೈನಿಕದ ಕೋಟಲೆಗಳನ್ನೂ ಅದು ಒಳಗೊಳ್ಳುವಂತೆ ಮಾಡುವ ಪ್ರಯತ್ನವನ್ನು ಅವರು ತಮ್ಮ ಗೀತೆಗಳಲ್ಲಿ ಮಾಡಿದ್ದಾರೆ. ಸಾಮಾನ್ಯ ಜನರ ಪ್ರತಿನಿಧಿಯಾಗಿ ಲಕ್ಷ್ಮಣರಾವ್ ಮಾತನಾಡುವಲ್ಲಿ ಅವರ ಯಶಸ್ಸನ್ನು ನಾವು ಕಾಣಬಹುದು.

ಲಕ್ಷ್ಮಣರಾವ್ ಕವಿತೆಗಳಲ್ಲಿ ಸೂಕ್ಷ್ಮ ವ್ಯಂಗ್ಯವಿದೆ. ತೆಳು ಹಾಸ್ಯದ ಲೇವಡಿಯಿದೆ. 'ಸುಬ್ಬಾಭಟ್ಟರ ಮಗಳೇ' ಅಂತಹ ಗೀತೆ ಇದಕ್ಕೆ ಅತ್ಯುತ್ತಮ ನಿದರ್ಶನ ಅಮ್ಮ, ಗುಮ್ಮ, ಸಹನೆ ಮೊದಲಾದ ಗೀತೆಗಳಲ್ಲಿ ನಾವು ಕಾಣುವ ವೈವಿಧ್ಯ, ವಿಸ್ತಾರ ಲಕ್ಷ್ಮಣರಾವ್ ಗೀತ ಜಗತ್ತು ಒಳಗೊಳ್ಳುವ ಅನುಭವ ಪ್ರಪಂಚದ ವ್ಯಾಪ್ತಿಯನ್ನು ಸೂಚಿಸುತ್ತದೆ.

ಇದೇ ಬಗೆಯ ವಿಸ್ತಾರ, ವೈವಿಧ್ಯವನ್ನು ನಾವು ಲಕ್ಷ್ಮಣರಾವ್ ಅವರಿಗೆ ಪ್ರಿಯವಾದ ಅವರ ಪ್ರೇಮಗೀತೆಗಳಲ್ಲೂ ಕಾಣುತ್ತೇವೆ. ಪ್ರೀತಿಯ ಉತ್ಕಟತೆಯಂತೆಯೇ ಅಗಲಿಕೆ, ವಿರಹ, ಭಗ್ನತೆ, ಹದಿಹರಯದ ಮೋಹ ಈ ಭಾವಗಳೂ ಅವರಲ್ಲಿ ಅದರ ಎಲ್ಲ ವರ್ಣ ಸೂಕ್ಷ್ಮಗಳೊಂದಿಗೆ ಕಾಣಿಸಿಕೊಳ್ಳುತ್ತವೆ. ಮನುಷ್ಯ ಸಂಬಂಧಗಳಲ್ಲಿ ಹೆಚ್ಚು ದಟ್ಟವಾಗಿ ಕಾಡುವ ಗಂಡು–ಹೆಣ್ಣಿನ ಸಂಬಂಧದ ಜಟಿಲತೆಗಳನ್ನು, ಉಲ್ಲಾಸ ವಿಷಾದಗಳನ್ನು ಲಕ್ಷ್ಮಣರಾವ್ ನಮ್ಮ ಮನಸ್ಸನ್ನು ಕಾಡುವ ಹಾಗೆ ಹಾಡಿದ್ದಾರೆ.

ಛಂದಸ್ಸಿನ ಪ್ರಯೋಗಗಳನ್ನು ಅಷ್ಟಾಗಿ ಆಧರಿಸದ ಲಕ್ಷ್ಮಣರಾವ್ ಕಥನಾಂಶವನ್ನು ಅಳವಡಿಸಿಕೊಳ್ಳುವ ಮೂಲಕ ಸಂವಹನದ ಸುಭಗತೆಯನ್ನು ಸಾಧಿಸುತ್ತಾರೆ ಮತ್ತು ಇಂಥ ರೀತಿಯ ಮೂಲಕ ಅವರು ಕನ್ನಡ ಕಾವ್ಯದ ಬಳ್ಳಿಯನ್ನು ನವ್ಯೋತ್ತರದ ಚಪ್ಪರದ ಮೇಲೆ ಹಬ್ಬಿಸುತ್ತಾರೆ.

ಆದ್ದರಿಂದಲೇ ಕಳೆದ ಮೂರು ನಾಲ್ಕು ದಶಕಗಳಲ್ಲಿ ಕನ್ನಡ ಕಾವ್ಯ ಕ್ಷೇತ್ರದಲ್ಲುಂಟಾದ ಸ್ಥಿತ್ಯಂತರಗಳ ಮಧ್ಯದಲ್ಲಿ ತಮ್ಮ ಕಾಲ ಮೇಲೆ ನಿಂತುಕೊಂಡು, ಎಲ್ಲವನ್ನೂ ಅನುಭವಿಸುತ್ತಲೇ ಸ್ಥಿರತೆಯನ್ನು ಉಳಿಸಿಕೊಂಡು, ಜೀವನೋತ್ಸಾಹದಿಂದ ನವ್ಯೋತ್ತರ ಸಂದರ್ಭವನ್ನು ವಿಭಿನ್ನ ರೀತಿಯಲ್ಲಿ ಸಾರ್ಥಕಗೊಳಿಸುತ್ತಾ ಬಂದಿರುವ ವಿಶಿಷ್ಟ ಕವಿ ಲಕ್ಷ್ಮಣರಾವ್‌ರವರಾಗಿದ್ದಾರೆ.

ತಮ್ಮ ಚೇತೋಹಾರಿ ನವ್ಯ ಕವಿತೆಗಳಿಂದ ಬಿ.ಆರ್.ಎಲ್. ತಮ್ಮ ಹೃದಯಸ್ಪರ್ಶಿ ನವ್ಯ ಭಾವಗೀತೆಗಳಿಂದ ಜನಪ್ರಿಯತೆಯನ್ನೂ ಸೂರೆ ಮಾಡಿದ್ದಾರೆ. ಕವಿತೆ ಇರಲಿ, ಗೀತೆ ಇರಲಿ, ನವ್ಯತೆ ಬಿ.ಆರ್.ಎಲ್. ರಚನೆಯ ಪ್ರಧಾನ ಭೂಮಿಕೆಯಾಗಿದೆ.

ಭಾವಗೀತೆಗಳಲ್ಲಿ ನವ್ಯತೆಯನ್ನು ತರುವುದು ಒಂದು ಸವಾಲು ಆಗಿರುತ್ತದೆ. ಗೀತೆ ಎಂದ ಕೂಡಲೆ ಅದು ಸಾಮಾನ್ಯವಾಗಿಯೇ ರಮ್ಯತೆಗೆ ಜೋತು ಬೀಳುತ್ತದೆ. ಆದರೆ ಬಿ.ಆರ್.ಎಲ್. ಗೀತೆಗಳು ಕಠೋರವಾದ ವಾಸ್ತವದ ಅರಿವಿನಲ್ಲಿ ಹುಟ್ಟುವುದರಿಂದ ಭಾವನೆಗಳ ತೀವ್ರತೆಯನ್ನು ಕಾಣಬಹುದೆ ಹೊರತು ಭಾವಾವೇಶವಲ್ಲ. ಶ್ರುತಿಮೀರಿದ ಹಾಡು, ವಿಷಾದ, ನೆನಪು ಮೊದಲಾದ ರಚನೆಗಳನ್ನು ನೋಡಬಹುದಾಗಿದೆ.

ಲಕ್ಷ್ಮಣರಾವ್ ಗೀತೆಗಳಲ್ಲಿ ಇನ್ನೊಂದು ವಿಶೇಷವಿದೆ. ಭಾವದ ಹೊಸ ಉಗಮ ಸ್ಥಾನಗಳನ್ನು ಅವರ ಗೀತೆಗಳು ಬಗೆಯುತ್ತವೆ. ಕಾಲ ಬದಲಾದಂತೆ ಒಂದು ಸಮಾಜದಲ್ಲಿ ಭಾವದ ಉಗಮ ಸ್ಥಾನಗಳೂ ಬೇರೆಯಾಗುತ್ತಾ ಹೋಗುತ್ತದೆ. ಇಂತಹ ಅರಿವಿನ ಫಲದಿಂದಾಗಿ ನವ್ಯಗೀತೆಗಳಲ್ಲಿ ನವ್ಯತೆ ತಾನೇ ತಾನಾಗಿಯೇ ಸಿದ್ಧಿತವಾಗುತ್ತದೆ.

ನವ್ಯ ಭಾವಗೀತೆಗೆ, ತುಂಟುತನದ, ನವುರು ಹಾಸ್ಯದ ಬೆದೆಯ ತೀಕ್ಷ್ಣತೆಯ ಹೊಸ ಹೊಸ ಎಳೆಗಳನ್ನೂ ಬಿ.ಆರ್.ಎಲ್. ದೊರಕಿಸಿದ್ದಾರೆ. ಆದ್ದರಿಂದಲೇ ನವ್ಯ ಭಾವಗೀತೆಯ ಅತ್ಯಂತ ಪ್ರಾತಿನಿಧಿಕ ಕವಿ ಎಂದು ಇವರ ಕವನಗಳು ಹಾಗೂ ಭಾವಗೀತೆಗಳ ಅಧ್ಯಯನದಿಂದ ಪ್ರಾತಿನಿಧಿಕ ಕವಿ ಎನ್ನಬಹುದು.

ಲಕ್ಷ್ಮಣ್‌ರಾವ್ ಕನ್ನಡದ ಅತ್ಯುತ್ತಮ ಕವಿಗಳಲ್ಲಿ ಒಬ್ಬರು ಎನ್ನಬಹುದು ದಿನನಿತ್ಯದ ಬೆಂಗಳೂರಿನ ಭಾಷೆಯಲ್ಲಿ ಅವರ ಕವಿತೆಗಳನ್ನು ಸೃಷ್ಟಿಸಿದ್ದಾರೆ. ಇವರ ಕವಿತೆಗಳಲ್ಲಿ ತುಂಟತನವನ್ನು ಇವರಷ್ಟು ವ್ಯಾಪಕವಾಗಿ ಅರ್ಥಪೂರ್ಣವಾಗಿ ಬಳಸಿರುವುದನ್ನು ಯಾರಿಲ್ಲ ಎಂಬುದನ್ನು ನಮ್ಮ ಅಧ್ಯಯನದಿಂದ ತಿಳಿಯಬಹುದು.

ಲಕ್ಷ್ಮಣರಾವ್ ಶೋಧಿಸುವ ರಹಸ್ಯಗಳೆಲ್ಲ ಸಾಮಾನ್ಯ ಜೀವನದ ರಹಸ್ಯಗಳೇ. ಸಾಮಾನ್ಯ ಜೀವನದಲ್ಲಿ 'ಅದ್ಭುತ'ಗಳು ಜರಗುತ್ತಲೇ ಇರುತ್ತವೆ. ಈ ಅದ್ಭುತಗಳನ್ನು ಅತ್ಯಂತ ಜಾಗರೂಕತೆಯಿಂದ ಲಕ್ಷ್ಮಣರಾವ್ ದಾಖಲಿಸುತ್ತಾರೆ.

ಸ್ಫೂರ್ತಿಯಿಲ್ಲದೆ ಕಾವ್ಯವಿಲ್ಲ ಎನ್ನುವುದು ನಿಜವಿದ್ದಂತೆ 'ಸ್ಫೂರ್ತಿಯನ್ನೇ ನೆಚ್ಚಿದರೆ ಕಾವ್ಯವಿಲ್ಲ' ಎನ್ನುವಷ್ಟೇ ನಿಜ. ಸ್ಫೂರ್ತಿ ಎಷ್ಟಾದರೂ ಮಳೆಯಂತೆ ಹೊರಗಿನಿಂದಬರುವುದಾದ್ದರಿಂದ ಬೇಂದ್ರೆಯವರ 'ಎದೆಯ ಒಕ್ಕಲಿಗ'ನನ್ನು ನೆನಪಿಗೆ ತಂದುಕೊಡುವ ಮೂಲಕ ಲಕ್ಷ್ಮಣರಾವ್ ಅವರ ಕಾವ್ಯ ಚಿಂತನೆಯನ್ನು ಪರಂಪರೆಗೆ ಜೋಡಿಸುತ್ತದೆ. ಇವರ ಕಾವ್ಯ ಸೀಮಿತ ವಲಯದ ಆಚೆಗಿನ ವಸ್ತುಗಳನ್ನೂ ಒಳಗೊಳ್ಳಲು ಅವರ ಕಾವ್ಯ ಹೊಂಚು ಹಾಕಿದೆ ಹಾಗೂ ಭರವಸೆ ಹುಟ್ಟಿಸುವ ಯಶಸ್ಸನ್ನು ಸಾಧಿಸಿದೆ.

ಕಾವ್ಯವನ್ನು ಮೆಚ್ಚು, ಮೆಚ್ಚದೇ ಇರುವ ಸ್ವಾತಂತ್ರ್ಯ ಎಲ್ಲರಿಗೂ ಇದೆ. ಬೇಂದ್ರೆ, ಅಡಿಗ, ರಾಮಾನುಜನ್‌ರಂಥ ಭಿನ್ನ ಕಾವ್ಯ ಪ್ರಕೃತಿಯ ಶಕ್ತಿಶಾಲೀ ಕವಿಗಳ ಪ್ರಭಾವವನ್ನು ಜೀರ್ಣಿಸಿಕೊಂಡು ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಬಂದುದು ಲಕ್ಷ್ಮಣರಾವ್ ಅವರ ಪ್ರಮುಖ ಸಾಧನೆಯಾಗಿದೆ.

ಸೈದ್ಧಾಂತಿಕ ಘರ್ಷಣೆಗಳು ರಾಜಕೀಯ, ಸಾಮಾಜಿಕ ಯುದ್ಧಗಳು ಅಕಾಡೆಮಿಯೇ ಮೊದಲಾದ ಸಂಸ್ಥೆಗಳೊಡ್ಡುವ ಆಮಿಷಗಳು ಹಾಗೂ ಕವಿಗಳನ್ನು ಸಾಮಾನ್ಯವಾಗಿ ಬಾಧಿಸುವ ಪ್ರಸಿದ್ಧಿಯ ಆಸೆಗಳು ಇವೆಲ್ಲದರ ಮಧ್ಯೆ ಕಲೆಗಾರಿಕೆಯನ್ನು ಧೀರ್ಘಕಾಲ ಪ್ರಕಾಶಮಾನವಾಗಿ ಬೆಳೆಸಿಕೊಂಡು ಹೋಗುವುದು ಸುಲಭವೇನಲ್ಲ. ಲಕ್ಷ್ಮಣರಾಯರು ಬರೆಯಲು ತೊಡಗಿದಾಗಲೇ ಪೋಲಿ ಪದ್ಯಗಳ ಕರ್ತಾರನೆಂದು ಬಂದ ಬಿರುದನ್ನೂ 'ಸಂಡೇ ಕವಿ' ವರ್ಗಕ್ಕೆ ಸೇರಿದವನೆಂಬ ಅವಹೇಳನವನ್ನೂ ಹೊತ್ತವರು ಆಗಿದ್ದಾರೆ.

ಹೊರಗೊಂದು ಒಳಗೊಂದು ಇಲ್ಲದ ಲಕ್ಷ್ಮಣರಾವ್ ಮನಸ್ಸು ಹಲವು ಭಾವನೆ, ಬದುಕಿಗೆ ಹಿಡಿದ ಕನ್ನಡಿಯಾಗಿಯೂ ಮೂಡಿದೆ. ಮಧ್ಯಮ ವರ್ಗದ ಯುವಕನ ಬಂಧನ – ಉಲ್ಲಂಘನೆಗಳ ಪ್ರೀತಿ, ಪ್ರೇಮ, ಪ್ರಣಯ, ರೋಮಾಂಚನ, ತಲ್ಲಣ, ದಾಂಪತ್ಯ, ಕವಿತೆ ಹಿಡಿದ ಹೆದ್ದಾರಿ, ಕಿರುದಾರಿಗಳ ಚಹರೆಗಳು ನಮಗೆ ಅಧ್ಯಯನದಿಂದ ತಿಳಿಯುತ್ತದೆ.

ಲಕ್ಷ್ಮಣರಾವ್‌ರವರ ಹಾಗೆಯೇ ಅವರ ಕವಿತೆಗಳು ಕೂಡ ಹುಬ್ಬುಗಳನ್ನು ಸಡಿಲ ಮಾಡುವಂತೆ ಮಾಡುತ್ತದೆ. ತುಟಿಯಂಚಿನಲ್ಲಿ ನಗೆ ತರಿಸುತ್ತದೆ. ನಮ್ಮ ಕಾಲದ ದುರಂತಗಳ ನೆನಪು ಕೊಡುವುದರ ಮೂಲಕ ಕಣ್ಣುಗಳನ್ನು ಒದ್ದೆಯಾಗಿಸುತ್ತದೆ.

ವ್ಯಕ್ತಿ, ವಿಚಾರ ಯಾವುದರ ಬಗ್ಗೆಯೂ ಧೋರಣೆ ತಳೆಯದ ಅಥವಾ ಅಂತಹ ಧೋರಣೆ ಅವರ ಸ್ವಭಾವದಲ್ಲೇ ಇಲ್ಲದ ಕವಿ ಲಕ್ಷ್ಮಣರಾವ್, ಅವರ ಲೇಖನಗಳು, ಕವಿತೆಗಳನ್ನು ವಾಸ್ತವದ ಎಲ್ಲಾ ಮಗ್ಗುಲುಗಳನ್ನು ಸ್ವೀಕರಿಸುತ್ತಲೇ, ಒಪ್ಪುತ್ತಲೇ ಅವರ ಮನಸ್ಸನ್ನು ಸದಾ ಆರೋಗ್ಯವಾಗಿ ಪ್ರಫುಲ್ಲವಾಗಿ, ನಿರ್ಮತ್ಸರವಾಗಿ ಇಟ್ಟುಕೊಂಡಿರುವ ಲಕ್ಷ್ಮಣ್‌ರಾವ್‌ರವರ ರಚನೆಗಳು ಜೀವನೋತ್ಸಾಹದಿಂದ ರಚಿಸಿರುವ ರಚನೆಗಳಾಗಿವೆ.

ಒಟ್ಟಾರೆ ಇವರ ಕವಿತೆಗಳ ಅಧ್ಯಯನದಿಂದ ನಾವು ತಿಳಿಯಬಹುದಾದ ವಿಷಯವೇನೆಂದರೆ ಉತ್ಸಾಹದಿಂದ ಜೀವಂತ ಕಾವ್ಯ ರಚಿಸಿದ ಲಕ್ಷ್ಮಣರಾವ್ ಕಳೆದ ಮೂರು ದಶಕಗಳಲ್ಲಿ ತಮ್ಮದೇ ವಿಶಿಷ್ಟ ಶೈಲಿ ರೂಪಿಸಿಕೊಂಡು, ಚಳುವಳಿಯ ಅಬ್ಬರದಲ್ಲಿ ತಮ್ಮನ್ನು ಕಳೆದುಕೊಳ್ಳದೆ ಮಹತ್ವದ ಕಾವ್ಯ ರಚಿಸಿದ್ದಾರೆ.

ನೆನಪಿನಲ್ಲಿಟ್ಟುಕೊಳ್ಳಬೇಕಾದ ಮತ್ತೆ ಮತ್ತೆ ಓದಿ ಸಂತೋಷಪಡಬಹುದಾದ ಅನೇಕ ಉತ್ತಮ ಕವಿತೆಗಳನ್ನು ನೀಡಿದ್ದಾರೆ. ಜನಪ್ರಿಯತೆಯನ್ನು ಸಂಶಯದಿಂದ ನೋಡುವ ಅಕೆಡೆಮಿಕ್ ವಿಮರ್ಶೆಯ ಹಂಗು ತೊರೆದು ಅಪಾರ ಜನಪ್ರೀತಿ ಪಡೆದಿದ್ದಾರೆ. ಕಾವ್ಯ ರಸಿಕರ ಮೆಚ್ಚುಗೆ ಗೌರವಗಳಿಗೆ ಪಾತ್ರರಾಗಿದ್ದಾರೆ.

ಒಟ್ಟಾರೆಯಾಗಿ ಬಿ.ಆರ್.ಲಕ್ಷ್ಮಣರಾವ್‌ರವರ ಕಾವ್ಯದಲ್ಲಿನ ಸ್ತ್ರೀ ಸಮಾಜ ಸಮಕಾಲೀನ ಇತರ ಕವಿಗಳ ಹಾಗೂ ಹಿರಿಯ ಕವಿಗಳ ಸ್ತ್ರೀ ಸಮಾಜಕ್ಕಿಂತ ಭಿನ್ನವಾದುದಾಗಿದೆ ಎಂಬ ನಿಲುವಿಗೆ ಈ ನನ್ನ ಅಧ್ಯಯನದ ಮೂಲಕ ಬರಲಾಗಿದೆ.

ಆಧಾರ ಗ್ರಂಥಗಳು

೧. "ಜೀವ ಜಲ" ಸಮಗ್ರಕಾವ್ಯ, ಬಿ.ಆರ್.ಲಕ್ಷ್ಮಣರಾವ್ ಸಪ್ನಬುಕ್ ಹೌಸ್, ಬೆಂಗಳೂರು – ೨೦೧೧

೨. "ಕವಿ(ತೆ)ಯ ಕತೆ" ಹಿಂದಿನ ಕಥಾಸಮಯಗಳ ಸಂಕಲನ, ಬಿ.ಆರ್. ಲಕ್ಷ್ಮಣರಾವ್, ಸಪ್ನ ಬುಕ್ ಹೌಸ್ – ಬೆಂಗಳೂರು –೨೦೧೩

೩. "ಸುಬ್ಬಾ ಭಟ್ಟರ ಮಗಳೇ" ಭಾವಗೀತೆಗಳು ಬಿ.ಆರ್. ಲಕ್ಷ್ಮಣರಾವ್, ಪ್ರಕಾಶಕರು ಅಂಕಿತಪುಸ್ತಕ ಬೆಂಗಳೂರು –೨೦೦೫

೪. "ಹನಿಗವಿತೆಗಳು", ಬಿ.ಆರ್.ಲಕ್ಷ್ಮಣರಾವ್, ಅಂಕಿತ ಪುಸ್ತಕ ಬೆಂಗಳೂರು – ೨೦೧೪

೫. "ಪಡಿಮಿಡಿತ" ಬಿ.ಆರ್.ಲಕ್ಷ್ಮಣರಾವ್ ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು – ೨೦೧೬

## ಪರಾಮರ್ಶನ ಗ್ರಂಥಗಳು


೧. ಕನ್ನಡ ಸಾಹಿತ್ಯ ಚರಿತ್ರೆ
ರಂ.ಶ್ರೀ.ಮುಗಳಿ.

೨. ಸಖೀಗೀತ
ದ.ರಾಬೇಂದ್ರೆ.

೩. ಮೈಸೂರು ಮಲ್ಲಿಗೆ
ಕೆ.ಎಸ್.ನರಸಿಂಹಸ್ವಾಮಿ

೪. 'ಕೊಲಂಬಸ್' (೧೯೮೫)
ಬಿ.ಆರ್.ಲಕ್ಷ್ಮಣರಾವ್, ಆಯ್ದ ಕವಿತೆಗಳು

೫. ಮಧ್ಯಸ್ಥ(೧೯೯೭) ಬಿ.ಆರ್.ಲಕ್ಷ್ಮಣರಾವ್(೨೦೦೬)
ಬಿ.ಆರ್.ಲಕ್ಷ್ಮಣರಾವ್ ಆಯ್ದ ಕವಿತೆಗಳು

೬. ಆಯ್ದ ಅರವತ್ತು ಕವನಗಳು (೨೦೦೬)
ಬಿ.ಆರ್. ಲಕ್ಷ್ಮಣರಾವ್, ಆಯ್ದಕವಿತೆಗಳು

೭. ಹನಿಗವಿತೆಗಳು,
ಬಿ.ಆರ್.ಲಕ್ಷ್ಮಣರಾವ್(೨೦೦೬)

೮. "ಭಾರತ ಬಿಂದು ರಶ್ಮಿ",
ಹನಿಗವಿತೆಗಳು(೧೯೯೭) ಬಿ.ಆರ್.ಲಕ್ಷ್ಮಣರಾವ್.

೯. ವಿನೋದ ಕವಿತೆಗಳು,
ಬಿ.ಆರ್, ಲಕ್ಷ್ಮಣರಾವ್(೧೯೯೪)

೧೦. ಸಮಗ್ರ ಕಾವ್ಯ (ಈ ವರೆಗಿನ ಕವಿತೆಗಳು)
ಬಿ.ಆರ್. ಲಕ್ಷ್ಮಣರಾವ್. ಶ್ಯಾಮರಾ ಕಣ್ಣು (೨೦೦೪), ಜೀವಜಲ(೨೦೧೧)

ಕಥಾ ಸಂಕಲನಗಳು

೧೧. ಜೆಸ್ಪರ್, ೧೯೮೦, ಕಬ್ಬೆಕ್ಕು – ೧೯೯೪, ನಿರಂತರ (ಸಂಕಲಿತ ಕಥೆಗಳು) ೨೦೦೫.
ಪ್ರೀತಿಯ ಬೆಳಕು (ಸಮಗ್ರ ಕಥಾಸಂಕಲ) ೨೦೧೪ ಬಿ.ಆರ್. ಲಕ್ಷ್ಮಣರಾವ್.

೧೨. ಹೀಗೊಂದು ಪ್ರೇಮಕಥೆ (ಕಾದಂಬರಿ)
ಬಿ.ಆರ್.ಲಕ್ಷ್ಮಣರಾವ್ (೧೯೮೧), (೨೦೦೬)

೧೩. ರಜನೀಶ್ ನಿಜರಥ (ಅನುವಾದ)
ಬಿ.ಆರ್.ಲಕ್ಷ್ಮಣರಾವ್ (೧೯೯೬), (೨೦೦೬)

೧೪. ಇತ್ಯಾದಿ (೨೦೦೨), ಆಗಿಂದಾಗ್ಗೆ (೨೦೧೦)
ಲೇಖನ ಸಂಕಲನಗಳು, ಬಿ.ಆರ್.ಲಕ್ಷ್ಮಣರಾವ್.

೧೫. 'ನಾಟಕಗಳು – ಭಲೇ ಮಲ್ಲೇಶ್ (೨೦೦೭),
ನನಗ್ಯಾಕೋ ಡೌಟು(೨೦೦೯), ಶ್ರೀಮ್ ರಾಜಾ...೧ (೨೦೦೨)

೧೬. ವ್ಯಕ್ತಿ ಚಿತ್ರಗಳು
ಬಿ.ಆರ್. ಲಕ್ಷ್ಮಣರಾವ್ ಮಣಿಮಾಲೆ (೨೦೧೩)

೧೭. "ಕನ್ನಡ ಸಾಹಿತ್ಯ ಕೋಶ",
ರಾಜಪ್ಪ ದಳವಾಯಿ.

೧೮. "ಹೊಸಗನ್ನಡ ಅರುಣೋದಯ",
ಶ್ರೀನಿವಾಸ ಹಾವನೂರ

೧೯. ಹೊಸಗನ್ನಡ ಸಾಹಿತ್ಯ ಚರಿತ್ರೆ
ಎಲ್.ಎಸ್. ಶೇಷಗಿರಿರಾವ್